ಚೇರ್ಕಾಡಿ ರಾಮಚಂದ್ರರಾಯರು

# ಬದುಕು ಮತ್ತು ವಿಚಾರ


ನಿರೂಪಣೆ

ಎ. ಕೆ. ಹಿಮಕರ

ಸಂಪಾದನೆ

ಸುಮ ಪೊನ್ನಮ್ಮ



ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯೂ.ಸಿ)

ಕರ್ನಾಟಕ, ೨೦೦೨

Cherkadi Ramachandra Rayaru - Baduku Mattu Vichara : ( Kannada ) The Life and Thoughts of Cherkadi Ramachandra Rao, as narrated to A. K. Himakar and Edited by Suma Ponnamma, Nambhoomi, Kanyana.

Published by : The Concerned for working children, 2002
303/2, L.B. Shasthri Nagar,
Vimanapura, Bangalore - 560 017
Karnataka
e-mail: cwc@pobox.com
website : www. workingchild.org

ಮುಖಪುಟ : ಉಮೇಶ್ ಎಂ.
ಛಾಯ ಚಿತ್ರ : ಗಣೇಶ್ ಕಲ್ಯಾಣಪುರ
ಚಿತ್ರಗಳು : ಹಿಮಕರ ಎ.ಕೆ.

ಬೆಲೆ : ರೂ. ೩೦

ಅಕ್ಷರ ಜೋಡಣೆ : ಶ್ರೀನಿಧಿ ಗ್ರಾಫಿಕ್ಸ್, ಬಸ್ರೂರು
ಮುದ್ರಣ : ನವೀನ್ ಆಫ್‌ಸೆಟ್ ಪ್ರಿಂಟರ್ಸ್, ಬಸ್ರೂರು



# ಮುನ್ನುಡಿ

ಅರವತ್ತರ ದಶಕದಲ್ಲಿ 'ಐದು ಎಕರೆಗಳು ಮತ್ತು ಸ್ವಾತಂತ್ರ್ಯ' ಎಂಬ ಪುಸ್ತಕವೊಂದರ ಪರಿಚಯ ನನಗಿತ್ತು. ಒಂದು ಕುಟುಂಬದ ಜೀವನಾವಶ್ಯಕ ವಸ್ತುಗಳನ್ನು ಐದು ಎಕರೆ ಜಮೀನಿನಲ್ಲಿ ಹೇಗೆ ಸಾಧಿಸಬಹುದೆಂಬುದನ್ನು ಈ ಪುಸ್ತಕದಲ್ಲಿ ವಿವರಿಸಲಾಗಿತ್ತು. ಆದರೆ ಈ ಪುಸ್ತಕ ಅಮೆರಿಕಾದಿಂದ ಬಂದ ಪುಸ್ತಕ. ಈ ನಮ್ಮ ಭಾರತದಲ್ಲಿ ಐದು ಎಕರೆ ಏಕೆ, ಬರೀ ಎರಡು ಎಕರೆಯಲ್ಲಿ ಜೀವನ ನಡೆಸುವ ವಿಧಾನವನ್ನು ಶ್ರೀ ಚೇರ್ಕಾಡಿ ರಾಮಚಂದ್ರ ರಾಯರು ತೋರಿಸಿಕೊಟ್ಟಿದ್ದಾರೆ. ಇಂತಹ ಒಂದು ಪುಸ್ತಕವು ಭಾರತದಲ್ಲಿ ಮಾತ್ರವಲ್ಲ, ಇಡೀ ವಿಶ್ವದ ಜನಸಾಮಾನ್ಯ ಬೇಸಾಯಗಾರರಿಗೆ ಮಾರ್ಗದರ್ಶಕವಾಗಬಹುದು. ಶ್ರೀ ರಾಮಚಂದ್ರ ರಾಯರು ಸರಳ ರೀತಿಯಲ್ಲಿ ಮಹಾತ್ಮಾ ಗಾಂಧೀಜಿ ಹಾಗೂ ವಿನೋಬಾರವರು ಹೇಳಿದುದನ್ನು ತಮ್ಮ ಜೀವನ ಶೈಲಿಯಲ್ಲಿ ಕಾರ್ಯರೂಪಕ್ಕೆ ತಂದಿದ್ದಾರೆ.

ಚೇರ್ಕಾಡಿಯವರ ಕೃಷಿ ವಿಧಾನಗಳ ಮಾದರಿಯನ್ನು ಜಪಾನಿನ ಫುಕುವೊಕಾ ಹಾಗೂ ಅಮೆರಿಕಾದ ಕವಿ /ಬೇಸಾಯಗಾರ ವೆಂಡಲ್ಲ್ ಬೆರ್ರಿಯವರ ಸಿದ್ಧಾಂತ / ಪ್ರಯೋಗಗಳಿಗೆ ಹೋಲಿಸಬಹುದು. ಆದರೆ ಈ ಹೋಲಿಕೆಯಲ್ಲಿ ಕಂಡು ಬರುವ ಮುಖ್ಯ ವ್ಯತ್ಯಾಸವೇನೆಂದರೆ ಚೇರ್ಕಾಡಿಯವರು ಯಾವುದಾದರು ಆಧಾರ ವ್ಯವಸ್ಥೆಗೆ ಮೊರೆಹೋಗದೆ ತಮ್ಮದೇ ಆದ ವ್ಯವಸ್ಥೆಯನ್ನು ಯಾವ ವಿಜ್ಞಾನಿ ಯಾ ಬೇಸಾಯಗಾರರ ಪರಿಚಯವಿಲ್ಲದೇ ತಮಗೆ ಅಗತ್ಯತೋರಿದ ಹಾಗೆ ರೂಪಿಸಿಕೊಂಡದ್ದು. ಚೇರ್ಕಾಡಿಯವರು ಗಾಂಧೀಜಿ ಹಾಗೂ ವಿನೋಬಾ ರಿಂದ ಪ್ರೇರಿತರಾಗಿದ್ದರೂ ಅದು ಬರೇ ಪುಸ್ತಕ ಜ್ಞಾನಕ್ಕೆ ಸೀಮಿತವಾಗಲಿಲ್ಲ. ತಾವು ಕೈಯಾರೆ ಕೆಲಸಮಾಡಿ ಅಭ್ಯಾಸಮಾಡಿಕೊಂಡ ಅಮೂಲ್ಯ ಸಾಧನೆಯದು. ಈ ಕೆಲಸವನ್ನು ಅವರು ಪರಿಸರ ಜ್ಞಾನ ಹಾಗೂ ಮಣ್ಣಿನ ಸಂರಕ್ಷಣೆ ಮುಂತಾದುವು ಜನಪ್ರಿಯವಾಗಿ ಪ್ರಚಲಿತವಾಗುವುದಕ್ಕೆ ಮೊದಲೇ ಜೀವನದಲ್ಲಿ ರೂಢಿಸಿಕೊಂಡ ವಿಚಾರ ಈ ಪುಸ್ತಕದಲ್ಲಿ ಚಿತ್ರಣವಾಗಿದೆ. ಈ ಜೀವನ ಶೈಲಿಯ ಪ್ರಯತ್ನವನ್ನು ಅವರು ಅವಶ್ಯಕತೆ ಹಾಗೂ ಅಗತ್ಯತೆಯಿಂದ ಮಾಡಿದರೇ ಹೊರತು ಯಾವುದೇ ಒಂದು ತೆವಲಿನಿಂದ ಮಾಡಲಿಲ್ಲವೆನ್ನುವುದು ಗಮನಾರ್ಹ. ಹೀಗೇ ವ್ಯವಸಾಯ ಮಾಡುವವರು ನಮ್ಮ ಹಳ್ಳಿಹಳ್ಳಿಗಳಲ್ಲಿ ಏಕೆ,

ವಿಶ್ವದಾದ್ಯಂತ ಬಡ ಜನರ ಮಧ್ಯೆ ಕೆಲಸ ಮಾಡುವವರು ಇದ್ದರೂ, ಇವರ ವಿಧಾನಗಳನ್ನು ಮೆಚ್ಚಿ ಬರೆದವರು ವಿರಳ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಭೂಮಿಯ ಸದಸ್ಯರು ತಮ್ಮ ಕೃಷಿ ವಿಧಾನಗಳಲ್ಲಿ ಚೇರ್ಕಾಡಿಯವರನ್ನು ಅನುಸರಿಸಿದ್ದು ಹಾಗೂ ದುಡಿಯುವ ಮಕ್ಕಳಿಗೆ ಅದನ್ನು ಕಲಿಸಿಕೊಡುವ ಪ್ರಯತ್ನ ಮಾಡುತ್ತಿರುವುದು ಶ್ಲಾಘನೀಯವೇ ಸರಿ.

ಈ ಪುಸ್ತಕದ ಬರಹ ಈಗ ಸರಳವಾಗಿ ಕಂಡುಬಂದರೂ ಇದನ್ನು ಬರೆದ ಕೆಲಸ ಅಷ್ಟು ಸುಲಭವಾಗಿರಲಿಲ್ಲ. ಏಕೆಂದರೆ ಚೇರ್ಕಾಡಿಯವರು ಕೈ ಕೆಲಸ ಮಾಡುವುದರಲ್ಲಿ ಪ್ರವೀಣರಲ್ಲದೇ ಅವರ ವಿಷಯ ಮಾತನಾಡುವುದು ಅವರಿಗೆ ಸ್ವಲ್ಪ ಕಷ್ಟವೆ. ಎರಡು ವರ್ಷಗಳಿಂದ ನಡೆಸಿದ ಚರ್ಚೆ ಹಾಗೂ ಮಾಹಿತಿಯನ್ನು ಪರಿಷ್ಕರಿಸುವ ಕೆಲಸ ನಡೆದು ಈ ಪುಸ್ತಕವನ್ನು ಒಟ್ಟು ಮಾಡಲಾಗಿದೆ. ಇದರಲ್ಲಿ ಮೂಡಿಬಂದ ಚಿತ್ರಗಳು ಹಾಗೂ ಚೇರ್ಕಾಡಿಯವರ ಮಾತುಗಳನ್ನೇ ಬರಹ ರೂಪದಲ್ಲಿ ಒಂದುಗೂಡಿಸುವ ಕಾರ್ಯವನ್ನು ಶ್ರೀ ಎ.ಕೆ. ಹಿಮಕರರವರು ಚೆನ್ನಾಗಿ ಮಾಡಿದ್ದಾರೆ.

ನಮ್ಮ ಭೂಮಿ, ಕನ್ಯಾನ — ಸುಮ ಪೊನ್ನಮ್ಮ

# ಓದುವ ಮುನ್ನ

ಸುಮಾರು ೧೯೯೫ ರವರೆಗೂ ಶ್ರೀ ಚೇರ್ಕಾಡಿ ರಾಮಚಂದ್ರರಾಯರ ಪರಿಚಯವೂ ನನಗಿರಲಿಲ್ಲ, ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯೂ.ಸಿ.) ಬಳಗದವರು ಅವರನ್ನು ಪರಿಚಯಿಸಿದರು. ಆ ಬಳಿಕ ಸಂದರ್ಭ ಸಿಕ್ಕಿದಾಗ ಮತ್ತು ಕೆಲವೊಮ್ಮೆ ಸಂದರ್ಭ ಸೃಷ್ಟಿಸಿಕೊಂಡು ಅವರನ್ನು ಭೇಟಿಯಾಗತೊಡಗಿದೆ. ಈ ನಡುವೆ ಅವರ ಕುರಿತಾಗಿ ನಾನು ಬರೆದ ಎರಡು ಲೇಖನಗಳನ್ನು 'ಹಿತ್ತಲಗಿಡ' ಮತ್ತು 'ಸಿರಿಸಮೃದ್ಧಿ' ಪತ್ರಿಕೆಗಳು ಪ್ರಕಟಿಸಿದವು. ಸಿ.ಡಬ್ಲ್ಯೂ.ಸಿ. ಜೊತೆ ಚೇರ್ಕಾಡಿಯವರದು ಬಹಳ ದೀರ್ಘಕಾಲಿನ ಸಂಬಂಧವಿದೆ. ನಮ್ಮ ಭೂಮಿಯ ಗ್ರಾಮೀಣ ವೃತ್ತಿ ತರಬೇತು ಕೇಂದ್ರ ಮತ್ತು ಅದರ ಕಾರ್ಯಕ್ಷೇತ್ರಗಳಲ್ಲಿ ಕೃಷಿ ಮಾಹಿತಿ ಸಂಪನ್ಮೂಲ ವ್ಯಕ್ತಿಯಾಗಿ ಶ್ರೀ ಚೇರ್ಕಾಡಿ ಬೆಸೆದುಕೊಂಡವರು. ಚೇರ್ಕಾಡಿ ಮಾದರಿ ತಮ್ಮ ರೈತಾಪಿ ಸಮುದಾಯಕ್ಕೆ ಬಹಳ ಸೂಕ್ತವಾಗಿದ್ದು. ಈ ವಿಚಾರವನ್ನು ಜನರ ನಡುವೆ ಕೊಂಡೊಯ್ಯಲು ಇಂತಹ ಒಂದು ಕೃತಿ ಸಹಕಾರಿಯಾಗಬಲ್ಲುದೆಂದು ಸಿ.ಡಬ್ಲ್ಯೂ.ಸಿ. ಬಳಗದವರಾದ ದಾಮು, ನಂದನಾ, ಕವಿತಾರವರು ಬಹಳ ಹಿಂದೆಯೇ ಆಲೋಚಿಸಿದ್ದರು. ಈ ಕಾರಣವಾಗಿ ಕೃತಿ ರಚನೆಗೆ ಬಹಳಷ್ಟು ಪ್ರೇರಣೆ, ಒತ್ತಾಸೆ ಇರಿಸಿದ್ದಾರೆ. ಹಾಗಾಗಿ ಸಿ.ಡಬ್ಲ್ಯೂ.ಸಿ. ಸಂಗ್ರಹಾಲಯ ದಲ್ಲಿದ್ದ ಸುಮಾರು ಕಾಲು ಶತಮಾನಗಳಷ್ಟು ಹಳೆಯದಾದ ಚೇರ್ಕಾಡಿ ಯವರೇ ಬರೆದಿಟ್ಟ ದಾಖಲೆಯೊಂದನ್ನು ನನಗೆ ಒದಗಿಸಿ ಕೃತಿ ರಚನೆಗೆ ನಾಂದಿ ಹಾಡಿದರು. ಅಲ್ಲದೇ ತಮ್ಮ ಇತ್ತೀಚೆಗಿನ ಒಂದಷ್ಟು ಬರಹಗಳನ್ನು ಚೇರ್ಕಾಡಿಯವರು ತಂದುಕೊಟ್ಟರು.

ಶ್ರೀ ಚೇರ್ಕಾಡಿ ರಾಮಚಂದ್ರರಾಯರು ನಮ್ಮ ನಡುವಿನಲ್ಲಿರುವ ಬಹಳ ಅಪರೂಪದ ವ್ಯಕ್ತಿ. ಹಳೆ ತಲೆಮಾರಿಗೆ ಸೇರಿದ ಇವರು ಹೊಸ ಜನಾಂಗಕ್ಕೂ ಮಾದರಿಯಾಗಬಲ್ಲ ಸಿದ್ಧಿ ಸಾಧನೆಗಳನ್ನು ಮೆರೆದಿದ್ದಾರೆ. ಸರಕು ಸಂಸ್ಕೃತಿಗೆ, ಪರಾವಲಂಬನೆಗೆ ಬಲಿಯಾಗಿರುವ ಇಂದಿನ ಯುವಜನಾಂಗ, ಚೇರ್ಕಾಡಿ ಯವರ ಸರಳತೆ, ತನ್ನತನಗಳನ್ನು ತುಸು ನಿಂತು ಯೋಚಿಸುವ ಅನಿವಾರ್ಯತೆ ಇದೆ. ಚೇರ್ಕಾಡಿ ವಿಚಾರ ಪರಿಪೂರ್ಣವಲ್ಲದಿರಬಹುದು ಆದರೆ ಇಲ್ಲೊಂದು ಸಾಧಿಸಿದ ದಾರಿ ಇದೆ.

ಇಂದು ಸಾವಯವ, ಸುಸ್ಥಿರ, ಪರಿಸರ ಸಹ್ಯ ಎಂದೆಲ್ಲಾ ವಿವಿಧ ಪ್ರಗತಿಪರ ಕೃಷಿ ಮಾದರಿಯ ಕುರಿತಾಗಿ ಗಂಭೀರ ಚಿಂತನೆ, ಪ್ರಯೋಗ ನಡೆಯುತ್ತಿದೆ. ಆದರೆ ಚೇರ್ಕಾಡಿಯಲ್ಲಿ ಅರ್ಧ ಶತಮಾನಗಳಷ್ಟು ದೀರ್ಘ

ಪ್ರಯತ್ನದ ಫಲಿತಾಂಶ ನಮ್ಮ ಎದುರಿಗಿದೆ. ಆಸಕ್ತರು ನಾನಾ ಮೂಲೆಗಳಿಂದ ಬಂದು ನೋಡುತ್ತಾರೆ. ಹೀಗೆ ಬರುವವರಲ್ಲಿ ತಜ್ಞರು ಮತ್ತು ಮಾಧ್ಯಮದವರೇ ಹೆಚ್ಚು. ನನ್ನಲ್ಲಿಗೆ ನಿಜವಾಗಿ ಬರಬೇಕಾದವರು ಹಳ್ಳಿಗಾಡಿನ ಕೃಷಿಕರು ಮತ್ತು ಜನಪ್ರತಿನಿಧಿಗಳು, ಆದರೆ ಅದೇ ಸಾಧ್ಯವಾಗಿಲ್ಲ ಎಂಬ ಕೊರಗು ಇವರದು. ಹಾಗಾಗಿ ದುಡಿಮೆಗಾರ ಕೃಷಿಕರಿಗೆ ಅವಶ್ಯ ಮಾಹಿತಿ ತಲುಪಿಸಲು ಇಂತಹ ಬರಹರೂಪ ಸಹಕಾರಿಯಾಗಬಲ್ಲುದೆಂಬುದು ನಮ್ಮ ನಂಬಿಕೆ.

ಚೇರ್ಕಾಡಿ ಮಟ್ಟಿಗೆ ಹೇಳುವುದಾದರೆ ಬರಹಕ್ಕಿಂತ ಅವರ ಮಾತುಗಳೇ ಹೆಚ್ಚು ಶಕ್ತಿಶಾಲಿ. ಹಾಗಾಗಿ ಉದ್ದೇಶಪೂರ್ವಕವಾಗಿ ಅವರನ್ನು ಕೆದಕಿ ಮಾಹಿತಿ ದಾಖಲಿಸಿಕೊಳ್ಳಲಾಗಿದೆ. ಇವೆಲ್ಲವುಗಳನ್ನು ಆಧಾರವಾಗಿರಿಸಿಕೊಂಡು ಪ್ರಸ್ತುತ ಕೃತಿ ರಚಿಸಲಾಗಿದೆ. ಹೂಗಳನ್ನು ಜೋಡಿಸುವ ದಾರದಂತೆ ಕೆಲವು ಭಾಷೆ ಮಾತ್ರ ನನ್ನದು. ವಸ್ತು ವಿಚಾರ, ಚಿಂತನೆ, ಉದಾಹರಣೆಗಳು ಸೇರಿದಂತೆ ಎಲ್ಲವೂ ಶ್ರೀ ಚೇರ್ಕಾಡಿಯವರದೇ ಆಗಿದೆ. ಪುಸ್ತಕದ ಕರಡು ಪ್ರತಿಯನ್ನು ಮತ್ತೆ ಓದಿ ಅನೇಕ ಒಳನೋಟ ಒದಗಿಸಿದವರು ಸುಮಾ ಪೊನ್ನಮ್ಮ. ಚೇರ್ಕಾಡಿ ವಿಚಾರಗಳನ್ನು ತೀಕ್ಷ್ಣಗೊಳಿಸಿ ಮತ್ತು ಗಟ್ಟಿಗೊಳಿಸಿ ಪುಸ್ತಕಕ್ಕೆ ಅಂತಿಮ ರೂಪುಕೊಡುವಲ್ಲಿ ಸುಮಾ ಬಹಳಷ್ಟು ಹೊಣೆ ವಹಿಸಿಕೊಂಡಿದ್ದಾರೆ. ಕೃತಿ ಹೊರಬಂದ ಈ ಸಂದರ್ಭದಲ್ಲಿ ಇವರೆಲ್ಲರಿಗೂ ನನ್ನ ವಂದನೆಗಳು.

**ಹಿಮಕರ ಎ.ಕೆ.**

# ಮೂಲ ಪ್ರೇರಣೆ

ಚೇರ್ಕಾಡಿ ನನ್ನ ಹುಟ್ಟೂರಲ್ಲ, ಬಂದು ನೆಲೆ ನಿಂತ ಊರು. ನಾನು ಹುಟ್ಟಿದ್ದು ಕೊಡಗಿನಲ್ಲಿ. ಈ ಜಿಲ್ಲೆಯ ಸಿದ್ಧಾಪುರ ತಾಲೂಕಿನ ಅರೆಕಾಡು ಎಂಬ ಹಳ್ಳಿಯಲ್ಲಿ. ಇಂದಿಗೆ ಸುಮಾರು ೮೦ ವರ್ಷಗಳ ಹಿಂದಿನ ಆ ಹಳ್ಳಿಯನ್ನು ಕಲ್ಪಿಸಿಕೊಳ್ಳುವುದೇ ಕಷ್ಟ. ಎಲ್ಲೆಲ್ಲೂ ದಟ್ಟ ಕಾಡು. ಎಲ್ಲಿಗೆ ಹೋಗುವುದಿದ್ದರೂ ದಟ್ಟ ಕಾಡಿನ ಸಂದುಗೊಂದುಗಳಲ್ಲಿ ನಡೆದೇ ಹೋಗಬೇಕು. ರಸ್ತೆ ವಾಹನ ಆ ದಿನಗಳಲ್ಲಿ ಕಂಡದ್ದೇ ಇಲ್ಲ. ಕಾಡಿನೊಳಗೆ ಒಂಟಿ ಮನೆ. ಮನೆ ಎಂದರೆ ಹುಲ್ಲು ಮಾಡಿನ ಗುಡಿಸಲೊಳಗಿನ ತುಂಬು ಕುಟುಂಬ. ಅಪ್ಪ ಅಮ್ಮ ಮಾತ್ರ ದೊಡ್ಡವರು. ಜೊತೆಗೆ ಏಳು ಚಿಕ್ಕ ಚಿಕ್ಕ ಮಕ್ಕಳು.

ಮನೆಯ ಸುತ್ತ ನಾಲ್ಕು ಬಾಳೆಗಿಡ, ಒಂದು ಚೂರು ಬೇಸಾಯದ ಭೂಮಿ, ಆದರೆ ಬೇಸಾಯ ಬದುಕುವುದಕ್ಕೆ ಸಾಕಾಗುತ್ತಿರಲಿಲ್ಲ. ಅಪ್ಪನಿಗೆ ಮಂತ್ರವಾದ, ವೈದ್ಯ ವಿಚಾರ, ಜ್ಯೋತಿಷ್ಯ ತಿಳಿದಿತ್ತು. ಆಸುಪಾಸಿನ ಹಳ್ಳಿಗರು ಇಂತಹ ಕೆಲಸಕ್ಕಾಗಿ ಕರೆಸುತ್ತಿದ್ದರು. ಇದರಿಂದಲೇ ಒಂದಷ್ಟು ಸಂಪಾದನೆ ಇದ್ದು ಕಷ್ಟದಲ್ಲಿ ಕುಟುಂಬ ನಿರ್ವಹಣೆಯಾಗುತ್ತಿತ್ತು. ತಾಯಿಗೆ ಈ ಏಳು ಮಕ್ಕಳ ಪಾಲನೆ ಪೋಷಣೆ ಜೊತೆಗೆ ಮನೆ ಕೆಲಸದ ಹೊರೆ. ಹೇಗೋ ಕುಟುಂಬ ಸಾಗುತ್ತಿತ್ತು.

ಒಂದು ಸಾರಿ ನಮ್ಮ ತಂದೆ ಯಾವುದೋ ಊರಿಗೆ ಪ್ರಯಾಣ ಹೋದವರು ಹಿಂತಿರುಗಿ ಬರಲಿಲ್ಲ. ಕೆಲವೊಮ್ಮೆ ಅನಿರೀಕ್ಷಿತವಾಗಿ ಒಂದೆರಡು ದಿನ ತಡವಾಗಿ ಬಂದದ್ದುಂಟು. ತಂದೆ ಬಾರದಿದ್ದುದು ತಾಯಿಗೆ ಆತಂಕ ಹುಟ್ಟಿಸಿತ್ತು. ಆಕೆ ಬಾಣಂತಿ ಬೇರೆ, ಬಾಣಂತನ ನೋಡುವವರೂ ಮನೆಯಲ್ಲಿ ಇಲ್ಲ. ಎಲ್ಲಾ ಆಕೆಯೇ ಮಾಡಿಕೊಳ್ಳುತ್ತಿದ್ದಳು. ರಾತ್ರಿ ಇಡೀ ಚಿಮಿಣಿ ದೀಪ ನೋಡುತ್ತಲೇ ಬೆಳಗು ಮಾಡಿದಳು. ಬೆಳಿಗ್ಗೆ ಯಾರೋ ಬಂದು ಸುದ್ದಿ ಕೊಟ್ಟರು. ಅಪ್ಪಯ್ಯ ಮನೆಗೆ ಬರುವ ದಾರಿಯಲ್ಲೇ ಮೃತಪಟ್ಟಿದ್ದರು. ಬಹುಶಃ ಅದು ಹೃದಯಾಘಾತವಾಗಿದ್ದಿರಬೇಕು.

ವಿಷಯ ತಿಳಿದ ಬಳಿಕ ನಮ್ಮ ಅಮ್ಮ ಕೂಡಾ ಮೃತಪಟ್ಟರು. ಗಂಡನ ಸಾವಿನ ವಾರ್ತೆಯೇ ಅಮ್ಮನಿಗೆ ಷಾಕ್ ನೀಡಿರಬೇಕು. ಈ ಬಗ್ಗೆ ಯಾವುದೇ ವಿವರ ನನಗೆ ನೆನಪಾಗುತ್ತಿಲ್ಲ. ಒಂದಂತೂ ನಿಜ. ನಾವು ಏಳು ಮಕ್ಕಳು

ಒಮ್ಮೆಲೇ ಅಮ್ಮ ಅಪ್ಪನನ್ನು ಕಳೆದುಕೊಂಡಿದ್ದೆವು. ತಂದೆ ತೀರಿ ಹೋಗುವುದಕ್ಕೆ ಮೊದಲು ವಾಂತಿ ಭೇದಿಯಿಂದ ಅವರು ಬಳಲುತ್ತಿದ್ದರು. ಪ್ರಯಾಣದ ದಣಿವು, ಹೊತ್ತಿಗೆ ಸರಿಯಾಗಿ ಊಟ, ಸಮರ್ಪಕ ಚಿಕಿತ್ಸೆ ಇಲ್ಲದೇ ಪ್ರಾಣ ಕಳೆದುಕೊಂಡಿರಬೇಕು.

ಈ ಸಂದರ್ಭಕ್ಕೆ ನಾನಿನ್ನೂ ಎರಡು ವರ್ಷ ಪ್ರಾಯ ಮುಗಿಸಿರಲಿಲ್ಲ. ನನ್ನ ಜೊತೆಗೆ ಬಂದ ೬ ತಿಂಗಳ ಮಗು ಮತ್ತು ನನ್ನ ಅಣ್ಣಂದಿರು ಮತ್ತು ಅಕ್ಕಂದಿರು, ಎಲ್ಲರೂ ಒಮ್ಮೆಲೇ ಅನಾಥರಾಗಿಬಿಟ್ಟೆವು. ನನ್ನ ಹಿರಿಯಕ್ಕನನ್ನು ಧರ್ಮಸ್ಥಳದ ಕಡೆಗೆ ಮದುವೆ ಮಾಡಿಕೊಟ್ಟಿದ್ದರು. ಅದೂ ಬಾಲ್ಯ ವಿವಾಹವಿದ್ದಿರಬೇಕು. ಒಂದು ಗಾದೆ ಮಾತು ಇದೆಯಲ್ಲಾ, 'ಸತ್ತವನ ಮಕ್ಕಳು ಇದ್ದವರ ಕೈಮೇಲೆ ' ಅಂತಾಯಿತು ನಮ್ಮ ಪಾಡು. ನಮ್ಮ ಅಪ್ಪ ಅಮ್ಮನ ಸಾವಿನ ಸುದ್ಧಿ ಹೇಗೋ ಧರ್ಮಸ್ಥಳಕ್ಕೆ ತಲುಪಿತು. ಸುದ್ದಿ ತಿಳಿದ ನಮ್ಮ ಬಾವ ತಕ್ಷಣ ಬಂದರೂ ಆಗಲೇ ಎಂಟು ದಿನ ಕಳೆದು ಹೋಗಿತ್ತು. ನಮ್ಮ ಅಪ್ಪ ಅಮ್ಮನ ಶವ ಸಂಸ್ಕಾರ ಹೇಗೆ ನಡೆಯಿತೋ ನೆನಪಿಲ್ಲ, ಸುದ್ದಿ ತಿಳಿದ ಅಮ್ಮನ ಅರಣ್ಯರೋದನ ಮಾತ್ರ ಕಣ್ಣಿಗೆ ಕಟ್ಟಿದಂತೆ ಉಳಿದುಹೋಯಿತು. ಏನೋ ಆಗಬಾರದ್ದು ನಡೆದುಹೋಗಿತ್ತು ಎನ್ನುವುದು ನನ್ನ ಮನಸ್ಸಿನಾಳದಲ್ಲಿ ಹೆಪ್ಪುಗಟ್ಟಿತ್ತು. ಅಂತೂ ನನ್ನ ಹೆತ್ತವರ ಪ್ರೀತಿ ಆಶ್ರಯಗಳನ್ನು ಮಮತೆ ಮಮಕಾರಗಳನ್ನು ನನಗೆ ಬುದ್ಧಿ ಬರುವ ಮೊದಲೇ ಕಳೆದುಕೊಂಡಿದ್ದೆ. ನನ್ನ ಬಾಲ್ಯದ ಈ ಪರಿಸ್ಥಿತಿಯೇ ಬಹುಶಃ ಬದುಕಿನ ಬಗೆಗಿನ ನನ್ನ ಇಂದಿನ ನಿಲುವಿಗೆ ಮೂಲ ಪ್ರೇರಣೆಗಳಿರಬೇಕು. ಅನಾಥರು, ದೀನ ದಲಿತರು, ನಿರ್ಗತಿಕ ಮಕ್ಕಳು, ಮರಿಗಳು, ಜನ ಸಮುದಾಯವನ್ನು ಕಂಡಾಗ ನನ್ನ ಹೃದಯ ತಳಮಳಗೊಳ್ಳುತ್ತದೆ. ಈ ಪರಿಸ್ಥಿತಿ ಸುಧಾರಣೆ ಆಗಲೇಬೇಕು ಅನ್ನಿಸುತ್ತದೆ. ಬಡಜನರ ಬದುಕಿಗೆ ಸಹಾಯವಾಗುವಂತಹ ಕೆಲಸ ಮಾಡಬೇಕೆಂಬ ದೃಢ ನಿರ್ಧಾರ ಮಾಡಿಕೊಂಡೆ. ಅಸಹಾಯಕರನ್ನು ಕಂಡಾಗ ನನ್ನಲ್ಲಿ ವಿನಯ ಹುಟ್ಟಿಕೊಳ್ಳುತ್ತದೆ. ನನ್ನ ಬಾವನೆಗಳೆಲ್ಲಾ ಬಡವರ ಪರವಾಗಿ ರೂಪುಗೊಂಡಿವೆ. ನನ್ನ ವಿಚಾರಗಳು ಬಡವರಿಗಾಗುವ ವಿಚಾರಗಳೇ. ನಾನು ನನಗಾಗಿ ರೂಪಿಸಿಕೊಂಡಿರುವ ನೀರೆತ್ತುವ ರಾಟೆ, ಗಿಡ ಬೆಳೆಸುವ ವಿಧಾನ, ಭತ್ತದ ಕೃಷಿ, ತೋಟಗಾರಿಕಾ ಕ್ರಮಗಳೆಲ್ಲವೂ ಬಡವರಿಗೆ ಸರಿಹೊಂದು ವಂತಹದ್ದಾಗಿದೆ.

# ಧರ್ಮಸ್ಥಳಕ್ಕೆ ವಲಸೆ

ಸಾವು ಸಂಭವಿಸಿದ ಎಂಟನೇ ದಿನಕ್ಕೆ ನಮ್ಮಲ್ಲಿಗೆ ಬಂದ ನಮ್ಮ ಹಿರೇ ಅಕ್ಕನ ಗಂಡ ನಿರ್ಗತಿಕರಾಗಿದ್ದ ಆರೂ ಮಕ್ಕಳನ್ನು ಸಂತೈಸಿ ತಮ್ಮೊಂದಿಗೆ ಧರ್ಮಸ್ಥಳಕ್ಕೆ ಕರೆದು ತಂದರು. ಬಹುಶಃ ಇದರ ಹೊರತಾಗಿ ಬೇರೆ ದಾರಿ ಇದ್ದಿರಲಿಲ್ಲ. ನಮ್ಮ ಪರಿಸ್ಥಿತಿ ಹಾಗಿತ್ತು. ಅರೆಕಾಡಿನಲ್ಲಿ ನಮ್ಮವರೆನ್ನುವವರು ಯಾರೂ ಇದ್ದಂತಿರಲಿಲ್ಲ. ಬಾವ ಬರುವ ಹೊತ್ತಿಗೆ ಇದ್ದ ಮನೆಯೇ ಸ್ಮಶಾನವಾಗಿತ್ತು. ಅಂತೂ ಧರ್ಮಸ್ಥಳದ ಅಕ್ಕನ ಮನೆಗೆ ವಲಸೆ ಬಂದಂತಾಯಿತು.

ಅಕ್ಕನ ಮನೆಯಲ್ಲೂ ಆರ್ಥಿಕ ಸ್ಥಿತಿ ಉತ್ತಮವಾಗಿರಲಿಲ್ಲ. ಹೇಗೋ ಸಂಸಾರ ನಿಭಾಯಿಸಿಕೊಂಡಿದ್ದ ಮನೆಗೆ ನಾವಾರು ಮಂದಿಯೂ ಹೊರೆಯಾಗಿದ್ದೆವು. ನಾವು ಧರ್ಮಸ್ಥಳಕ್ಕೆ ಬಂದು ಒಂದು ವರ್ಷ ತುಂಬುವುದರೊಳಗೆ ನನ್ನ ಎರಡನೇ ಅಕ್ಕನ ಮದುವೆ ನಡೆದು ಹೋಯಿತು. ಮದುವೆಯ ಸಮಾರಂಭ ಮುಗಿದು ಕಿರಿಯಕ್ಕ ಗಂಡನೊಂದಿಗೆ ಹೊರಡುವ ವೇಳೆ ಅವರಿಗೆ ಏನನ್ನಿಸಿತ್ತೋ ಏನೋ ನನ್ನನ್ನೂ ಕರೆದುಕೊಂಡರು.

ನಾನು ಕೊಡಗಿನಿಂದ ಧರ್ಮಸ್ಥಳಕ್ಕೆ ಬಂದ ಪ್ರಯಾಣದ ನೆನಪು ಮರೆಯಾಗಿದೆ. ಆದರೆ ಧರ್ಮಸ್ಥಳದಿಂದ ಚೇರ್ಕಾಡಿಗೆ ಬಂದ ವಿವರ ನೆನಪು ಅಚ್ಚಳಿಯದೆ ಉಳಿದಿದೆ. ನಮ್ಮ ಬಾವ ಒಂದು ಎತ್ತಿನಗಾಡಿಯನ್ನು ಪ್ರಯಾಣಕ್ಕಾಗಿ ಗೊತ್ತು ಮಾಡಿದ್ದರು. ಅದರಲ್ಲಿ ಕಾರ್ಕಳದವರೆಗೆ ಬಂದೆವು. ಆಗಲೇ ಅದೊಂದು ಪೇಟೆ ರೀತಿ ಇತ್ತು. ಅಲ್ಲಿ ಒಂದು ಹೋಟೆಲಿನಲ್ಲಿ ಊಟ ಮಾಡಿ ದಣಿವಾರಿಸಿಕೊಂಡೆವು. ಪಕ್ಕದಲ್ಲೊಂದು ಬಾವಿ ಇತ್ತು. ಅಕ್ಕ ಅದರಿಂದ ನೀರೆತ್ತುತ್ತಿದ್ದಳು. ಆಗ ಅಲ್ಲಿದ್ದ ಒಬ್ಬಳು ವಿಧವೆ ಅದ್ಯಾಕೊ ಅಕ್ಕನಿಗೆ ಬೈಯುತ್ತಿದ್ದಳು. ನನಗೆ ಒಳಗೊಳಗೇ ಹೆದರಿಕೆ ಆಗ್ತಿತ್ತು. ಸ್ವಲ್ಪ ಸಮಯದ ನಂತರ ಒಂದು ಬಸ್ಸು ಬಂದು ನಿಂತಿತು. ಅಲ್ಲಿದ್ದವರೆಲ್ಲಾ ಅದರ ಹೊಟ್ಟೆಯೊಳಗೆ ನುಗ್ಗತೊಡಗಿದರು. ನಾನು ಜೋರಾಗಿ ಅಳುತ್ತಿದ್ದೆ. ಅಕ್ಕ ನನ್ನನ್ನು ಸಮಾಧಾನಿಸುತ್ತಾ ಬಲವಂತವಾಗಿ ಅವಳ ಪಕ್ಕದಲ್ಲಿ ಕೂರಿಸಿಕೊಂಡಳು. ಹಿರಿಯಡಕ ಬಂದೊಡನೆ ನಾವೆಲ್ಲಾ ಇಳಿದೆವು. ನನಗೇಕೋ ಸಮಾಧಾನ ವಾಗಿತ್ತು. ಅಲ್ಲಿಂದ ಒಳದಾರಿ ಹಿಡಿದು ನಡೆಯತೊಡಗಿದೆವು. ಆಗ ಹೊಳೆಗಳಿಗೆ ಸೇತುವೆ ಇದ್ದಿರಲಿಲ್ಲ. ಬಜೆ ಹೊಳೆ ದಾಟುವಾಗ ನನ್ನ ಕಾಲು ಜಾರುತ್ತಿದ್ದವು. ಅಕ್ಕ ನನ್ನ ಕೈಹಿಡಿದುಕೊಂಡಿದ್ದಳು. ಪ್ರಕೃತಿ ಬಹಳ

ಸುಂದರವಾಗಿತ್ತು. ಸಂಚಾರ ತುಸು ಕಷ್ಟ. ಈಗ ಹಾಗಲ್ಲ. ವಾಹನ ಸೌಕರ್ಯ ಬೇಕಾದಷ್ಟಿದೆ. ಆದರೆ ಪರಿಸರ ವನ್ನು ಒಟ್ಟಿಗೇ ಹಾಳುಗೆಡವಿದ್ದೇವೆ. ಅಂತೂ ಬಹಳ ದೂರ ಪ್ರಯಾಣ ಮಾಡಿದ ಬಳಿಕ ಚೇರ್ಕಾಡಿಗೆ ಬಂದು ತಲುಪಿದೆವು. ಹೀಗೆ ಬಂದವನು ಇಲ್ಲಿಯೇ ಶಾಶ್ವತವಾಗಿ ನೆಲೆನಿಲ್ಲುವಂತಾದೆ.

## ಆರಂಭದ ಕಲಿಕೆ - ಗಂಟಿ ಮೇಯಿಸುವುದು

ಚೇರ್ಕಾಡಿಯ ಅಕ್ಕನ ಮನೆಯಲ್ಲಿ ವಾಸ ಹೊಸ ಬದುಕು ಕಂಡಿತು. ತಾಯಿ ಕಳೆದುಕೊಂಡ ನನಗೆ ಅಕ್ಕನೇ ತಾಯಿಯಂತಾದಳು. ನನ್ನ ಆರೈಕೆ, ಊಟ-ತಿಂಡಿ ಎಲ್ಲವೂ ಅವಳನ್ನೆ ಅನುಸರಿಸಿಕೊಂಡಿತ್ತು. ನನ್ನ ಏಳೆಂಟನೇ ಪ್ರಾಯದವರೆಗೂ ಮನೆ ಸುತ್ತಲೇ ವ್ಯವಹಾರದ ಜಗತ್ತಾಗಿತ್ತು. ಅಕ್ಕ-ಬಾವ ಹೇಳಿದ ಸಣ್ಣ ಪುಟ್ಟ ಕೆಲಸ ಮಾಡುವುದು. ಕೈಕಾಲು ಸ್ವಲ್ಪ ಗಟ್ಟಿಯಾದ ಕೂಡಲೇ ನನಗೆ ಹೊಸ ಕೆಲಸ ಸಿಕ್ಕಿತು. ಅದು ಮನೆಯ ದನಕರುಗಳನ್ನು ದಿನಾ ಬೆಳಗ್ಗೆ ಹೊಡೆದು ಕೊಂಡು ಹೋಗಿ ಆಸುಪಾಸಿನ ಗುಡ್ಡದಲ್ಲಿ ಮೇಯಿಸುವುದು. ಪಕ್ಕದವರ ಹಿತ್ತಲಿಗೆ ದಾಳಿ ಮಾಡದಂತೆ ಅವುಗಳನ್ನು ನೋಡಿಕೊಳ್ಳುವುದು. ಮಾತು ಬಾರದ ಅವುಗಳೊಂದಿಗೆ ನಿತ್ಯ ನನ್ನ ಸಂಭಾಷಣೆ. ನನ್ನ ಪರಿಸರದ ಪ್ರಾಣಿ ಪಕ್ಷಿಗಳೊಂದಿಗೆ ನನ್ನ ಜೀವನ ಕಾಡು ಪಕ್ಷಿಗಳ ಹಾಡು ಆಲಿಸುವುದು. ಋತು ಬದಲಾದಂತೆ ತಮ್ಮಿಚ್ಛೆಗೇ ಬದಲಾವಣೆ ಹೊಂದುವ ಪ್ರಕೃತಿಯನ್ನು ನೋಡುವುದು. ಕಾಡು ಹಣ್ಣು ಆರಿಸಿ ತಿನ್ನುವುದು. ನನ್ನಂತೆಯೇ ದನ ಎಬ್ಬಿಕೊಂಡು ಗುಡ್ಡಕ್ಕೆ ಬರುವ ಇತರ ಮಕ್ಕಳ ಜೊತೆ ಹರಟುವುದು. ಹೀಗೇ ಸದಾ ಪ್ರಕೃತಿಯ ಮಡಿಲಲ್ಲೇ ಬದುಕು ಸವೆಯುತ್ತಿತ್ತು. ಹತ್ತಿರ ದಲ್ಲೆಲ್ಲೂ ಶಾಲೆ ಇದ್ದಿರಲಿಲ್ಲ. ಒಮ್ಮೊಮ್ಮೆ ಬಾವನೇ ಅಕ್ಷರ ಹೇಳಿಕೊಡು ತ್ತಿದ್ದರು.ಹೀಗೇ ಜೀವನದಲ್ಲಿ ಕಲಿತ ಮೊದಲ ಪಾಠ ದನ ಮೇಯಿಸುವ ಕೆಲಸ. ಒಂದಾಗಿ ಒಂದು ವಿಧದಲ್ಲಿ ನೆಮ್ಮದಿಯಾಗಿ ಕಾಲ ಕಳೆದ ದಿನಗಳವು. ಬದುಕಿನಲ್ಲಿ ಬಂಧನಗಳಿರಲಿಲ್ಲ.

## ಗಾಂಧಿವಾದಕ್ಕೆ ಮಾರುಹೋದದ್ದು

ಸುಮಾರು ೧೯೩೦ ಹೊತ್ತಿಗೆ ಚೇರ್ಕಾಡಿಯಲ್ಲೊಂದು ಪ್ರಾಥಮಿಕ ಶಾಲೆ ತೆರೆಯಲ್ಪಟ್ಟಿತ್ತು. ನನ್ನನ್ನೂ ಶಾಲೆಗೆ ಸೇರುವಂತೆ ಮಾಡಿದರು. ನಾನು ೧ನೇ ತರಗತಿಗೆ ಸೇರಿಕೊಂಡೆ. ಆಗ ರಾಮಚಂದ್ರ ಪಾಟೀಲ ಎಂಬವರು ನಮಗೆ ಅಧ್ಯಾಪಕರಾಗಿದ್ದರು. ಆ ಕಾಲದಲ್ಲಿ ಅವರು ತಿಂಗಳಿಗೆ ಒಂಬತ್ತು ರೂಪಾಯಿ ಸಂಬಳಕ್ಕೆ ದುಡಿಯುತ್ತಿದ್ದರು ಯಾವಾಗಲೂ ಖಾದಿವಸ್ತ್ರವನ್ನೇ ಧರಿಸುತ್ತಿದ್ದರು.

ಕಾಲರ್ ಇಲ್ಲದ ಜುಬ್ಬಾ. ಗಂಡ-ಹೆಂಡತಿ ಮತ್ತು ಒಂದು ಮಗುವಿ ನೊಂದಿಗೆ ಅವರ ಜೀವನ. ಆ ಮೇಲೆ ಇವರ ಸಂಸಾರ ಹಿಗ್ಗಿರಬೇಕು. ಇವರ ಮಕ್ಕಳು ಯಾರೂ ಅವರ ಜೀವನ ವಿಧಾನವನ್ನು ಅನುಸರಿಸಲಿಲ್ಲ.

ರಾಮಚಂದ್ರ ಪಾಟೀಲರು ಅಪ್ಪಟ ಗಾಂಧೀವಾದಿಗಳಾಗಿದ್ದರು. ಅದು ಭಾರತದ ಸ್ವಾತಂತ್ರ್ಯ ಹೋರಾಟ ತೀವ್ರಗೊಳ್ಳುತ್ತಿದ್ದ ಕಾಲ. ಮಹಾತ್ಮ ಗಾಂಧೀಜಿಯವರು ದೇಶದ ಮೂಲೆ ಮೂಲೆಗಳಿಗೆ ಸಂಚರಿಸಿ ಸ್ವಾತಂತ್ರ್ಯ ಚೇತನ ಮೂಡಿಸುತ್ತಿದ್ದರು. ನಮ್ಮ ಪಾಟೀಲ ಮಾಸ್ತರರು ತುಂಬಾ ಸರಳ-ಸಜ್ಜನ. ಮಹಾತ್ಮ ಗಾಂಧೀಜಿಯವರಿಂದ ತುಂಬಾ ಪ್ರಭಾವಿತ ರಾಗಿದ್ದುದರಿಂದ ಅವರು ಏನೇ ಪಾಠ ಹೇಳುತ್ತಿದ್ದರೂ ಅದರಲ್ಲಿ ಗಾಂಧೀಜಿಯವರ ವಿಚಾರಗಳೇ ತುಂಬಿಕೊಂಡಿರುತ್ತಿತ್ತು. ಗಾಂಧಿ ವಿಚಾರಗಳನ್ನು ವಿವರಿಸಿ ಹೇಳುತ್ತಿದ್ದುದು ಮಾತ್ರವಲ್ಲದೆ ಹೇಗೆ ಪಾಲಿಸಿಕೊಂಡು ಬರಬೇಕೆಂದೂ ಸ್ವತಃ ಪಾಲಿಸುವ ಕ್ರಮಗಳನ್ನು ತೋರಿಸಿಕೊಡುತ್ತಿದ್ದರು. ಇವೆಲ್ಲವುಗಳೂ ನನ್ನನ್ನು ಆಕರ್ಷಿಸಿದವು. ಮನಸ್ಸಿನಾಳದಲ್ಲಿ ತೀವ್ರ ಪ್ರಭಾವ ಬೀರಿದ್ದುವು. ಸ್ವಂತ ಆಡಳಿತ ನಿರ್ವಹಣೆ ಮಾಡುವುದು, ಸ್ವತಂತ್ರ ಜೀವನ ನಡೆಸುವುದು, ಸ್ವಾವಲಂಬಿಗಳಾಗುವುದು ಮೊದಲಾದ ವಿಚಾರಗಳನ್ನು ಮನದಟ್ಟಾಗುವಂತೆ ಹೇಳುತ್ತಿದ್ದರು. ಅವರ ಮಾತುಗಳನ್ನು ಆಲಿಸುತ್ತಿದ್ದಂತೆಯೇ ನನ್ನ ಮನಸ್ಸು ಪುಳಕಗೊಳ್ಳುತ್ತಿತ್ತು.

ಮಹಾತ್ಮಾ ಗಾಂಧಿಯವರು ಬಡವರ ಮೇಲೆ ಕನಿಕರ ಪಟ್ಟರು. ಸ್ವಾತಂತ್ರ್ಯ ಸಿಗಬೇಕು, ಬಡವರ, ದೀನದಲಿತರ ಉದ್ಧಾರ ಆಗಬೇಕೆಂದು ಅವರು ಹಂಬಲಿಸಿದರು. ಅದಕ್ಕಾಗಿಯೇ ಸ್ವತಃ ಪೆಟ್ಟುತಿಂದವರು, ಜೈಲುವಾಸ ಅನುಭವಿಸಿದವರು, ಅಹಿಂಸಾತ್ಮಕ ಜನಪರ ಹೋರಾಟ ನಡೆಸಿದರು. ಇಂತಹ ವಿಚಾರಗಳು ನನ್ನ ಮನಸ್ಸಿನಲ್ಲಿ ನಾಟಿ ನಿಂತವು. ನಮ್ಮ ದೇಶ ಇಂದೂ ಬಡತನದ ಕಾಯಿಲೆಯಿಂದ ಒದ್ದಾಡುತ್ತಿದೆ. ಹಾಗಾಗಿ ನನ್ನೊಳಗಿನ ಗಾಂಧಿ ವಿಚಾರಗಳು ಇನ್ನೂ ಜೀವಂತವಾಗಿವೆ.

## ಹಸಿವು ಮತ್ತು ಗಾಂಧಿವಾದ

ನನಗೆ ೧೫-೧೬ ವರ್ಷ ಪ್ರಾಯವಿರಬಹುದು. ನನ್ನ ಅಧ್ಯಾಪಕರು ಹೇಳಿದ್ದ ಮಾತುಗಳು ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿದುಬಿಟ್ಟಿದ್ದವು. ನನ್ನ ಹೆತ್ತವರು ಕಡು ಬಡತನದಲ್ಲಿದ್ದುದು ಗಮನಕ್ಕೆ ಬಂದಿತ್ತು. ಅಂತೆಯೇ ಹಿರಿಯಕ್ಕನ ಕುಟುಂಬ ಕೂಡಾ. ಇಲ್ಲಿ ಚೇರ್ಕಾಡಿಯಲ್ಲಿ ನನ್ನ ಪೋಷಕರಂತಿದ್ದ

ಕಿರಿಯಕ್ಕನ ಕುಟುಂಬ ಕೂಡಾ ಹೊಟ್ಟೆ, ಬಟ್ಟೆಗಾಗಿ ಬಹಳ ಕಷ್ಟಪಡುತ್ತಿದ್ದುದು ನನ್ನ ಕಣ್ಣೆದುರಿಗೇ ಕಾಣಿಸುತ್ತಿತ್ತು. ಕೇವಲ ಹರಕು ಮುರುಕು ಹಳೆಯ ತುಂಡು ಬಟ್ಟೆಗಳೇ ನನ್ನವುಗಳು. ಕೆಲವೊಮ್ಮೆ ಒದ್ದೆ ಬಟ್ಟೆಗಳನ್ನೇ ತೊಡಬೇಕಾಗುತ್ತಿತ್ತು. ಈ ಪ್ರಾಯದಲ್ಲಿಯೇ ಹೊಟ್ಟೆ ಪಾಡಿನ ಚಿಂತೆ ದೊಡ್ಡದಾಯಿತು. ತರಗತಿಯಲ್ಲಿ ಕೇಳಿಸಿಕೊಂಡ ಗಾಂಧೀಜಿಯವರ 'ಬಡತನದ ಭಾರತ' ಇದೇ ಇರಬೇಕೆಂದು ಗುರುತಿಸಿಕೊಂಡೆ. ನನ್ನ ಸುತ್ತಲಿನ ಜಗತ್ತೇ ನನಗೆ ಭಾರತ. ನಾನು ದೇಶ ಸಂಚಾರ ಮಾಡಿದವನಲ್ಲ. ಆದರೂ ಗಾಂಧೀಜಿಯವರ ವಿಚಾರದ ಅನುಭವಗಳಿಂದ ದೇಶವಿಡೀ ಹೀಗೇ ಇದೆ, ಜನರೆಲ್ಲಾ ಎಷ್ಟು ಬಡತನದಲ್ಲಿರುವರೆಂಬುದನ್ನು ಗ್ರಹಿಸಿಕೊಂಡೆ. ಸಂತ ಕಬೀರ್‌ದಾಸ ಒಮ್ಮೆ ಹೀಗೆ ಹೇಳಿದ್ದರು. "ರಾಮನಾಮ ಜಪ ಮಾಡಬೇಕಾದದ್ದೆ. ಆದರೆ ಹೊಟ್ಟೆ ಹಸಿಯುತ್ತಿದೆಯಲ್ಲಾ?!" ಹಾಗಾಗಿ ಹೊಟ್ಟೆಯ ಹಸಿವನ್ನು ಯಾವ ಪೂಜೆ ಹೋಮಗಳೂ ಪರಿಹರಿಸಲಾರವು ಅದಕ್ಕೆ ಪ್ರತ್ಯೇಕ ವ್ಯವಸ್ಥೆ ಬೇಕೇಬೇಕು. ಆತನೂ ಹೇಳಿದ್ದು ಮನುಷ್ಯನಾದವನಿಗೆ ಅತೀ ಮುಖ್ಯವಾದುದು ಅನ್ನ ಮತ್ತು ವಸ್ತ್ರ. ಆ ದಿನಗಳಲ್ಲೇ ಮಹಾತ್ಮ ಗಾಂಧಿಯವರೂ ಇದನ್ನೇ ಸಾರುತ್ತಿದ್ದರು. ಭಾವೀ ಭಾರತದ ಪರಿಸ್ಥಿತಿಯನ್ನು ಅವರು ಆಗಲೇ ತಿಳಿದವರಾಗಿದ್ದರು. ಪ್ರತಿಯೊಬ್ಬ ಭಾರತೀಯನೂ ತನ್ನ ಅನ್ನ, ವಸ್ತ್ರದ ಉತ್ಪಾದನೆಯನ್ನು ಸಾಧಿಸಿಕೊಳ್ಳದಿದ್ದರೆ ಮುಂದೆ ಬಹಳ ಕಷ್ಟ ಇರುವುದಾಗಿ ಸಾರುತ್ತಿದ್ದರು. ಈ ಎಲ್ಲಾ ವಿಚಾರಗಳು ನನಗೆ ಶಾಲೆಯಲ್ಲಿಯೇ ಸಿಕ್ಕಿದುವು. ಹಾಗಾಗಿ ನನ್ನ ವೈಯುಕ್ತಿಕ ಸ್ಥಿತಿಗತಿಗಳ ಹಿನ್ನಲೆಯಲ್ಲಿ ನಾನೇನು ಮಾಡಬೇಕೆಂದು ಬಹಳವಾಗಿ ಯೋಚಿಸುತ್ತಿದ್ದೆ.

## ಮಗ್ಗದ ಗೆಳೆತನ

ನನ್ನ ಹೊಟ್ಟೆಪಾಡಿನ ಚಿಂತೆ ತೀವ್ರಗೊಳ್ಳುತ್ತಿದ್ದಂತೆಯೇ ಒಂದು ದಿನ ನನ್ನ ಅಧ್ಯಾಪಕರು ಒಂದು ಕೈಮಗ್ಗ, ಒಂದು ಚರಕವನ್ನು ಶಾಲೆಗೆ ತಂದರು. ಅವರೇ ಸ್ವತಃ ನೂಲು ತಯಾರಿಸತೊಡಗಿದರು. ನನ್ನಲ್ಲಿ ಕುತೂಹಲ, ಆಶ್ಚರ್ಯ ಮೂಡಿತು. ಇವುಗಳ ಸಹಾಯದಿಂದ ಏನೇನೋ ಮಾಡಬಹುದಲ್ಲಾ ಅನಿಸಿತು. ನಾನು ನೂಲುವುದರಿಂದ ನನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾಧ್ಯ ಎಂಬುದು ಮನವರಿಕೆಯಾಯಿತು. ನಾನು ನೂಲುವುದನ್ನು ಕಲಿಯತೊಡಗಿದೆ. ಜೊತೆ ಜೊತೆಗೆ ಬಟ್ಟೆ ನೇಯುವುದನ್ನೂ ಆರಂಭಿಸಿದೆ. ಆ ಚಿಕ್ಕ ವಯಸ್ಸಿನಲ್ಲಿ ನನಗಿದು ಅರ್ಥವಾಗಿದ್ದರೂ

ಅದನ್ನು ಪರಿಪೂರ್ಣವಾಗಿ ರೂಪಿಸುವ ಸಾಮರ್ಥ್ಯವಿದ್ದಿರಲಿಲ್ಲ. ಆದರೆ ಸೂಕ್ತ ಪರಿಹಾರ ಹೊಂದಿಸಿಕೊಳ್ಳುವುದು ನನಗೆ ಅನಿವಾರ್ಯವಾಗಿತ್ತು. ನಿರಂತರ ಆ ದಿಕ್ಕಿನಲ್ಲೇ ಪ್ರಯತ್ನ ನಡೆಸುತ್ತಾ ಹೋದೆ. ಕೈ ಕೆಲಸದಿಂದಲೇ ಮನಃ ಶಾಂತಿ ಪಡೆಯುವ ಪ್ರಯತ್ನ ನಡೆಸಿದೆ.

ನಾನು ೨ನೇ ತರಗತಿ ಮುಗಿಸಿ, ೩ನೇ ತರಗತಿಯಲ್ಲಿ ೩ ತಿಂಗಳು ಕಳೆದೆ. ಕಷ್ಟದ ಮಳೆಗಾಲ, ಕನ್ನಡ ಓದುವುದು ಬರೆಯುವುದು ನನ್ನಿಂದ ಸಾಧ್ಯವಾಗಿತ್ತು. ೩ರಲ್ಲಿ ನಮಗೆ ಇಂಗ್ಲಿಷ್ ಕಲಿಸುತ್ತಿದ್ದರು. ಮುಂದೆ ಓದುವ ಆಸೆ ಇದ್ದರೂ ಪರಿಸ್ಥಿತಿ ಸರಿ ಇರಲಿಲ್ಲ. ಬೇರೆ ದಾರಿ ಕಾಣದೇ ೩ನೇ ತರಗತಿಯ ೩ನೇ ತಿಂಗಳಿನಲ್ಲಿ ಶಾಲೆ ಕೈ ಬಿಟ್ಟೆ! ಅಂದು ಶಾಲೆ ಬಿಟ್ಟ ಕಾರಣಗಳು ಏನೇ ಇದ್ದರೂ, ಇಂದು ನೋಡಿದಾಗ ಅದೇ ಸೂಕ್ತ ಎನಿಸುತ್ತದೆ. ನನ್ನ ಬದುಕಿಗೆ ಹೊಸ ಆಯಾಮ ರೂಪಿಸಿಕೊಳ್ಳವ ಅವಕಾಶ ದೊರೆಯಿತು. ಬರೇ ಓದು ಬರಹದ ಪದವಿ ಮಾಡಿಕೊಂಡಿರುತ್ತಿದ್ದರೆ ಯಾವುದಾದರೂ ಹೊಟ್ಟೆಪಾಡಿನ ನೌಕರಿಯಲ್ಲಿ ಕಾಲ ಕಳೆದು ಬಿಡುತ್ತಿದ್ದೆ. ಅನಿವಾರ್ಯ ಕಾರಣಗಳಿಂದಾಗಿ ನಾನು ಈ ಚೇರ್ಕಾಡಿ ವಿಧಾನವನ್ನು ಸಾಧಿಸುವ ಅವಕಾಶ ದೊರೆಯಿತು. ಈ ನಿಟ್ಟಿನಲ್ಲೇ ಇಂದಿನ ಶಿಕ್ಷಣ ಪದ್ಧತಿ ಅಸಮರ್ಪಕವೆಂದು ನಾನು ಪರಿಗಣಿಸಿರುವುದು. ಮೊನ್ನೆ ತಾನೇ ಬ್ರಹ್ಮಾವರದ ಕಾಲೇಜಿನಲ್ಲಿ ನನಗೊಂದು ಸನ್ಮಾನ ಕಾರ್ಯಕ್ರಮ ನಡೆಯಿತು. ಪ್ರಸಿದ್ಧ ವೈದ್ಯರಾದ ಡಾ|| ಬಿ. ಎಂ. ಹೆಗ್ಡೆಯವರು ಅತಿಥಿಗಳಾಗಿ ಬಂದಿದ್ದರು. ಕಾರ್ಯಕ್ರಮದ ನಂತರ ತಮ್ಮೊಂದಿಗಿದ್ದ ತಮ್ಮ ಪತ್ನಿಯನ್ನು ಪರಿಚಯಿಸಿದರು. ಅವರ ಶ್ರೀಮತಿಯವರು ನೀವೆಷ್ಟು ಓದಿಕೊಂಡಿದ್ದೀರೆಂದು ನನ್ನನ್ನು ಪ್ರಶ್ನಿಸಿದರು. ನಾನು ಕೇವಲ ೨ನೇ ಕ್ಲಾಸು ಓದಿದವನೆಂದೆ. ಆಗ ಹೆಗ್ಡೆಯವರು, ತಮ್ಮ ಪತ್ನಿಯನ್ನುದ್ದೇಶಿಸಿ, ಬರೇ ೨ನೇ ಕ್ಲಾಸು ಕಲಿತ ಕಾರಣ ಚೇರ್ಕಾಡಿಯವರು ಇಷ್ಟು ಮೇಲ್ಮಟ್ಟದ್ದನ್ನು ಸಾಧಿಸಿದ್ದಾರೆ. ಒಂದು ವೇಳೆ ಪದವಿ ಪಡೆದಿರುತ್ತಿದ್ದರೆ ಕ್ಲಾರ್ಕ್ ಆಗಿ ಜೀವನ ಮುಗಿಸಿಬಿಡುತ್ತಿದ್ದರೆಂದು ಹಾಸ್ಯ ಚಟಾಕಿ ಹಾರಿಸಿದರು. ಡಾ|| ಹೆಗ್ಡೆಯವರು ತಮಾಷೆಯಾಗಿ ಹೇಳಿದ ಅಭಿಪ್ರಾಯ ನನ್ನ ಮಟ್ಟಿಗೂ ಸರಿ ಎನಿಸಿತು. ನನ್ನ ಕನಿಷ್ಠ ಶಾಲಾ ಓದು ನನಗೆ ಹೆಚ್ಚೇನೂ ಹಾನಿ ಮಾಡಲಿಲ್ಲ. ಬದುಕಿನ ನಿಜವನ್ನು ಸಾಧಿಸಲು ಅನುಕೂಲ ಮಾಡಿಕೊಟ್ಟಿತು. ನಾನು ಅಗತ್ಯದ ಕಡೆಗೆ ಸರಳವಾಗಿ ಮುನ್ನಡೆದೆ.

ನನ್ನ ಅವಶ್ಯಕತೆಯ ಒತ್ತಡವಿದ್ದುದರಿಂದ ನನ್ನ ನೂಲುವ-ನೇಯುವ ಕಲಿಕೆ ಬಹಳ ವೇಗವಾಗಿ ಸಾಗುತ್ತಿತ್ತು. ದಿನದಿಂದ ದಿನಕ್ಕೆ ಬಹಳ ಸುಲಭದಲ್ಲಿ ಕೆಲಸದ ಕೌಶಲ್ಯ ಕರಗತವಾಗುತ್ತಿತ್ತು. ಹೇಗಾದರೂ ಮಾಡಿ ವಸ್ತ್ರ ಸಿದ್ಧ

ಮಾಡಲೇಬೇಕೆಂಬ ಛಲ ನನ್ನಲ್ಲಿತ್ತು. ಜೊತೆಗೆ ಮಹಾತ್ಮರ ಕರೆ, ಪಾಟೀಲ ಮಾಸ್ತರರ ಧ್ವನಿ ಹೃದಯದಾಳದಲ್ಲಿ ಗುಣಗುಣಿಸುತ್ತಿತ್ತು. ನನ್ನಂತೆಯೇ ಇತರ ೧೦ಮಂದಿ ಸೇರಿಕೊಂಡು ಒಂದು ಖಾದಿ ಸಂಘವನ್ನು ರಚಿಸಿಕೊಂಡೆವು. ಮಗ್ಗ, ಪರಿಕರಬೇಕಲ್ಲಾ? ನಮ್ಮಲ್ಲಿ ಬಂಡವಾಳವಿರಲಿಲ್ಲ. ವರಾಡ-ವಂತಿಗೆ ಹಾಕಿ, ಮಗ್ಗ ಕ್ರಯಕೊಟ್ಟು ತಂದೆವು. ಹೇಳಿಕೊಡುವ ವ್ಯವಸ್ಥೆ ಆಗಬೇಕಲ್ಲಾ? ಬ್ರಹ್ಮಾವರದ ಸಾಲಿಕೇರಿಯಿಂದ ನೇಕಾರರನ್ನು ಕರೆಸಿದೆವು. ನೇಯ್ಗೆ ಆರಂಭವಾದರೂ ಬಹಳ ಮಂದಿಗೆ ಇದು ರಗಳೆ ಕಂಡಿತು. ಬಿಟ್ಟು ಬಿಟ್ಟರು. ನನಗೆ ಅನಿವಾರ್ಯತೆ ಇದ್ದುದರಿಂದ ನಾನು ಮುಂದುವರಿಸಿಕೊಂಡು ಹೋದೆ. ಹೇಗೋ ಒಂದು ವರ್ಷ ಆಗುವಷ್ಟರಲ್ಲಿ ನಮ್ಮ ಖಾದಿ ಸಂಘ ನಿಂತು ಹೋಯಿತು. ಹೇಳಿಕೊಡುವ ಸೆಟ್ಟಿಗಾರರಿಗೆ ಸಂಬಳ ಕೊಡುವುದೇ ಕಷ್ಟವಾಗಿತ್ತು. ಯಾರೂ ಉತ್ಪಾದನೆ ಮಾಡುವುದಿಲ್ಲವಾದರೆ ಹುಟ್ಟುವಳಿ ಎಲ್ಲಿಂದ ಬರಬೇಕು?

## ಬದುಕುವ ಕಸುಬಿನ ಬವಣೆ

ನನ್ನ ನೇಯ್ಗೆ ಕಸುಬು ಗಟ್ಟಿಗೊಳ್ಳುವ ಹಂತದಲ್ಲೇ ನಮ್ಮ ಆಧಾರ ಸ್ತಂಭದಂತಿದ್ದ ಖಾದಿ ಸಂಘ ಕುಸಿದು ಬಿದ್ದದ್ದು ನನಗೆ ತೀವ್ರ ಆಘಾತ ತಂದಿತು. ಈ ಪರಿಸ್ಥಿತಿಯಲ್ಲಿ ನನ್ನನ್ನು ಮತ್ತೆ ಪರಾಮರ್ಶೆ ಮಾಡಿಕೊಳ್ಳ ಬೇಕಾಯಿತು. ಕಸುಬು ಮುಂದುವರಿಸುವ ಹೊರತು ನನಗೆ ಬೇರೆ ದಾರಿ ಇರಲಿಲ್ಲ. ಹೇಗಾದರೂ ಮಾಡಿ ಕಸುಬು ಕಲಿಯುವುದರ ಜೊತೆಗೆ ಸಂಪಾದನೆ ಮಾಡಲೇಬೇಕೆಂಬ ಅಚಲ ನಿರ್ಧಾರಕ್ಕೆ ಬಂದೆ. ಅಲ್ಲಿ ಇಲ್ಲಿ ವಿಚಾರಿಸಿದ ಬಳಿಕ ನೇಯ್ಗೆಯ ಕುಲ ಕಸುಬುದಾರರೊಂದಿಗೆ ಸೇರಿಕೊಳ್ಳಲು ನಿರ್ಧರಿಸಿದೆ. ಆದರೆ ಬ್ರಾಹ್ಮಣನಾದ ನನಗೆ ಅದು ಅಷ್ಟು ಸುಲಭದ ವಿಚಾರವಾಗಿರಲಿಲ್ಲ. ನಮ್ಮ ಭಾರತದ ಜಾತಿ ವ್ಯವಸ್ಥೆಯಲ್ಲೇ ಬೆಳೆದು ಬಂದದ್ದು ಕಸುಬುಗಳು ಜಾತಿ ಆಧಾರಿತವಾಗಿದೆ. ನಾನು ಪೌರೋಹಿತ್ಯ ಹಿಡಿಯಬೇಕಾಗಿತ್ತು.

ನನಗೆ ನೇಯ್ಗೆಯಲ್ಲಿ ವಿಶ್ವಾಸ. ಅಂತೂ ಬ್ರಹ್ಮಾವರದ ಸಾಲಿಕೇರಿಯಲ್ಲಿ ಕಸುಬು ಹಿಡಿದೆ. ಸೆಟ್ಟಿಗಾರರೊಬ್ಬರ ಮನೆಯಲ್ಲಿ ಕೆಲಸ ಮತ್ತು ಅಲ್ಲೇ ವಾಸ. ಅದೂ ಸಣ್ಣ ಸಣ್ಣ ಕಟ್ಟಡಗಳು. ವಾಸಕ್ಕೆ ಪ್ರತ್ಯೇಕ ಕೋಣೆಗಳಿಲ್ಲ. ಏನು ಮಾಡುವುದು ಮಗ್ಗದ ಕೋಣೆಯಲ್ಲೇ ಮಲಗಿ ನಿದ್ರಿಸುವುದು. ಬ್ರಾಂಪ್ತೆ ಅಮ್ಮ ಚಟ್ನಿ ಮಾಡಿಕೊಡುತ್ತಿದ್ದರು. ಒಮ್ಮೆ ಮಾಡಿಕೊಟ್ಟರೆ ಮುಂದಿನ ಮೂರು ದಿವಸಕ್ಕೆ ಸಾಕಾಗುತ್ತಿತ್ತು. ನಾನೇ ಗಂಜಿ ಬೇಯಿಸಿ

ಕೊಳ್ಳುತ್ತಿದ್ದೆ. ದಿನಕ್ಕೆ ಎರಡು ಸಿದ್ದಿ ಅಕ್ಕಿ ಬೇಕಾಗುತ್ತಿತ್ತು. ಆ ಕಾಲದಲ್ಲಿ ಅದರ ಬೆಲೆ ಅರ್ಧ ಆಣೆ. ಅಂದರೆ ೬ ಪೈಸೆಗೆ ಸಮ. ಹೀಗೆ ನನ್ನ ಆರಂಭಿಕ ಕಸುಬು ಜೀವನ ಸಾಗುತ್ತಿತ್ತು.

## ಸ್ವಂತ ದುಡಿಮೆ - ಮಗ್ಗವೇ ದೇವರು

ನೇಯ್ಗೆಯ ಪರಿಣತಿ ಹಾಗೂ ಮಗ್ಗದ ಮೇಲೆ ಹಿಡಿತ ಸಾಧಿಸಿಕೊಂಡ ಮೇಲೆ ಸ್ವಂತ ದುಡಿಮೆ ಮಾಡುವ ಧೈರ್ಯ ಬಂತು. ಆದರೂ ಬಂಡವಾಳ ಬೇಕಲ್ಲಾ? ಮಗ್ಗ, ಚರಕ, ಲಾಳಿಗಳು, ಕಚ್ಚಾ ಹತ್ತಿ ಎಲ್ಲವೂ ಖರೀದಿ ಮಾಡಿಕೊಳ್ಳಬೇಕು, ಬಟ್ಟೆ ಸಿದ್ಧವಾಗದೇ ಸಂಪಾದನೆ ಕೈಗೆ ಬರುವಂತಿಲ್ಲ. ಅದೆಲ್ಲಾ ಆಗಿಂದಾಗ ಆಗುವಂತದಲ್ಲ. ಸಾಲ ಕೊಟ್ಟವರೂ ತಡಕೊಳ್ಳುವಂತಿರಬೇಕು. ದೊಡ್ಡ ಆಲೋಚನೆಗಳು ಕಾರ್ಯಗತವಾಗುವಂತಿರಲಿಲ್ಲ.

ನನ್ನ ಒಡಲಿನ ಆಸೆ ಕಮರತೊಡಗಿದಾಗ ನಮ್ಮ ಬಾವನೇ ಮುಂದೆ ಬಂದರು. ಎಲ್ಲಿಂದಲೋ ಒಂದು ಮಗ್ಗವನ್ನು ಹೇಗೋ ಸಂಪಾದಿಸಿಕೊಟ್ಟರು. ಆಸೆ ಚಿಗುರೊಡೆದುದನ್ನು ಕಂಡು ಖುಷಿ ಪಟ್ಟೆ. ಸ್ವಂತ ದುಡಿದು ತಿನ್ನುವ ದಿನ ಬಂದುದಕ್ಕೆ ಹರುಷಗೊಂಡೆ. ಮಗ್ಗವೇ ದೇವರಂತೆ ಕಾಣಿಸಿತು. ಬಾವನ ಮನೆಯಲ್ಲೇ ದುಡಿಮೆ ಆರಂಭವಾಯಿತು. ನನ್ನ ನಿರೀಕ್ಷೆಯಂತೆ ದುಡಿಮೆ ಯಶಸ್ವಿಯಾಗತೊಡಗಿತು. ಬಟ್ಟೆ ಮಾರಾಟ ಮಾಡಿದಾಗ ಖರ್ಚು ಹೋಗಿ ಉಳಿಕೆಯಾಗುತ್ತಿತ್ತು. ಸದಾ ಹಣಕಾಸಿನ ಅಡಚಣೆ ಇದ್ದ ಬಾವ ನನ್ನ ಉಳಿಕೆಯ ಹಣವನ್ನೆಲ್ಲಾ ತಾವೇ ಖರ್ಚು ಮಾಡುತ್ತಿದ್ದರು. ಉಳಿತಾಯ ಮಾಡುವ ನನ್ನ ಕನಸು ಒಡೆದು ಚೂರಾಗುತ್ತಿತ್ತು. ಈ ವಿಚಾರವಾಗಿ ನನಗೂ ಅವರಿಗೂ ಭಿನ್ನಾಭಿಪ್ರಾಯ ಬಂದವು. ಅವರಿಗೆ ಕೆಲವು ದುರಭ್ಯಾಸಗಳಿದ್ದುವು. ನೆರೆಕರೆಯಲ್ಲಿ ನ್ಯಾಯ-ಗಲಾಟೆ ನಡೆಸುತ್ತಿದ್ದರು. ಸ್ಟೇಶನ್, ಕೋರ್ಟು ವ್ಯವಹಾರ ದೊಡ್ಡದಾಯಿತು. ಹಣದ ಅಗತ್ಯ ಬಂದಾಗಲೆಲ್ಲಾ ನನ್ನನ್ನು ಕೇಳುತ್ತಿದ್ದರು. ಕಾಯಿಲೆ, ಕಸಾಲೆ ಹೆಚ್ಚಾಯಿತು. ನಾನು ೫೦೦೦-೦೦ ರೂಪಾಯಿ ಕೊಟ್ಟೆ. ಅದೂ ಸಾಲದಾಯಿತು. ಈ ನಡುವೆ ಅಕ್ಕ ತೀರಿ ಕೊಂಡಳು. ಬಾವನಿಗೆ ಹುಟ್ಟುವಳಿ ಮಾಡುವುದರಲ್ಲಿ ಆಸಕ್ತಿ ಇದ್ದಿರಲಿಲ್ಲ. ತಾಳಮದ್ದಳೆ-ಯಕ್ಷಗಾನಗಳಲ್ಲಿ ಸಮಯ ಹಾಳು ಮಾಡುತ್ತಿದ್ದರು. ನನ್ನಿಂದ ಪಡೆದುಕೊಂಡ ಹಣವನ್ನು ಅವರು ವಾಪಾಸು ಕೊಡುತ್ತಿರಲಿಲ್ಲ. ನನ್ನ ದುಡಿಮೆಯ ಹಣವನ್ನು ನಾನು ರಕ್ಷಿಸದಿದ್ದರೆ ಆ ದುಡಿಮೆ ನಿರರ್ಥಕವೆಂದು ಭಾವಿಸಿದೆ.

ಇದೂ ಒಂದು ರೀತಿಯ ಪರಕೀಯತೆ ಎಂದು ನನಗನ್ನಿಸುತ್ತಿತ್ತು. ಆ ದಿನಗಳಲ್ಲಿ ದೇಶದ ಸಂಪತ್ತನ್ನು ಬ್ರಿಟಿಷರು ಲೂಟಿ ಮಾಡಿ ಮೋಜು ಮಾಡುತ್ತಿದ್ದದ್ದು ನನಗೆ ಮನವರಿಕೆಯಾಗಿತ್ತು. ಈಗಲೂ ಜನರ ದುಡಿಮೆಯ ಹಣವನ್ನು ದೇಶದ ಕೆಲವೇ ಕೆಲವರು ತಮ್ಮದಾಗಿಸಿಕೊಳ್ಳುತ್ತಿದ್ದಾರೆ. ಹಾಗಾಗಿ ಬಡವರು ಸದಾ ಬಡತನದಲ್ಲಿರಬೇಕಾಗಿದೆ. ಹಾಗೆಯೇ ವಿದೇಶೀ ಬಂಡವಾಳದಾರರು ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಇಲ್ಲಿ ಆರಂಭಿಸಿ ದೊಡ್ಡ ಮೊತ್ತದ ಬಂಡವಾಳ ಹೂಡುತ್ತಿದ್ದಾರೆ. ಇಂತಹ ಬಂಡವಾಳಗಳು ನಮ್ಮ ಹಳ್ಳಿಯ ಸಂಪತ್ತನ್ನೆ ನಾಶಮಾಡುತ್ತಿವೆ. ಅವರು ಹಣ ಸುರಿಯುವುದು ಅವರ ಲಾಭಕ್ಕಲ್ಲದೇ ನಮ್ಮ ಅಭಿವೃದ್ಧಿಗಾಗಿಯೇ ? ಖಂಡಿತಾ ಅಲ್ಲ. ನಮ್ಮನ್ನು ನಾವೇ ಬಚಾವ್ ಮಾಡಬೇಕಾಗಿದೆ. ಅಂತೂ ನಾನು ಕೊನೆಗೆ ನನ್ನ ಪರಿಸ್ಥಿತಿಯನ್ನು ಹಿಡಿತದಲ್ಲಿರಿಸುವುದಕ್ಕಾಗಿ ಬಾವನಿಂದ ಬೇರೆ ಆದೆ.

## ಮಗ್ಗದಿಂದ ಮದುವೆಗೆ

ಬಾವನ ಮನೆಯಿಂದ ಹೊರಬಿದ್ದ ನನಗೆ ಒಂಟಿ ಜೀವನವಾಯ್ತು. ಕೆಲದಿನಗಳಲ್ಲಿ ಹಿರಿಯರೊಬ್ಬರು ಸಹಾಯ ಮಾಡಲು ಮುಂದೆ ಬಂದರು. ವಾಸಕ್ಕಾಗಿ ಕಟ್ಟಡವನ್ನು ಕೊಟ್ಟು ದುಡಿಮೆ ಮಾಡಲು ಅನುಕೂಲತೆ ಒದಗಿಸಿದರು. ಸಂಪಾದನೆಯ ದಾರಿ ತಿಳಿದಿದ್ದ ನನಗೆ ಮನೆ ನೋಡಿಕೊಳ್ಳಲು ತಮ್ಮ ಸೋದರ ಸೊಸೆಯನ್ನೇ ಮದುವೆ ಮಾಡಿಕೊಡಲು ಮುಂದಾದರು. ನಾನು ಮದುವೆ ಮಾಡಿಕೊಳ್ಳುವ ಪೂರ್ವನಿರ್ಧಾರ ಹೊಂದಿರಲಿಲ್ಲ. ಆದರೆ ಹಿರಿಯರ ಸಲಹೆ ನನಗೂ ಸರಿ ಎನಿಸಿತು. ವೃತ್ತಿ ಜೀವನಕ್ಕೆ ಇದು ಅಡ್ಡಿಯಾಗದೆಂದೂ, ಬದಲಿಗೆ ಪೂರಕವಾಗಬಹುದೆಂದೂ ಸಂಸಾರಿಗನಾಗಲು ಸಮ್ಮತಿಸಿದೆ. ಬಹಳ ಬಳಲಿದ್ದ ನನಗೆ ಆಶ್ರಯವೊಂದರ ಅನಿವಾರ್ಯತೆ ಇತ್ತು. ದಿಡೀರಾಗಿ ಹೊಸ ಕನಸುಗಳನ್ನು ಹೆಣೆಯಲು ಆರಂಭಿಸಿದೆ. ಮದುವೆಗೆ ಹಣ ಬೇಕಲ್ಲಾ! ಪುತ್ತೂರು ಕಡೆಯ ಯಾರೋ ಸಜ್ಜನರೊಬ್ಬರಿಂದ ಹತ್ತು ರೂಪಾಯಿ ಕೇಳಿ ಪಡೆದು ಗಡದ್ದಾಗಿ ಮದುವೆ! ಮಂಗಳೂರಿನ ಶೇಡಿಗುಡ್ಡದಲ್ಲಿ ಮದುವೆ ಕಾರ್ಯಕ್ರಮ. ಆಗ ಸೇತುವೆಗಳಿಲ್ಲದ ಕಾರಣ ಒಂದೇ ವಾಹನದಲ್ಲಿ ಮಂಗಳೂರಿಗೆ ತಲುಪುವಂತಿರಲಿಲ್ಲ. ಸಿಕ್ಕಿದಲ್ಲಿ ಬಸ್ಸು ಹತ್ತಿ ನಾವೂ ಮಂಗಳೂರಿಗೆ ತಲುಪಿದೆವು. ವೈದಿಕ ವಿಧಿಗಳೊಂದಿಗೆ ಮದುವೆ ಮುಗಿಯಿತು. ಉಡುಗೊರೆಯಾಗಿ ನಮಗೆ ಕೈಗೆ ಸಿಕ್ಕಿದ ಹಣದಲ್ಲಿ ಪವನಿಗೆ ಐವತ್ತು ರೂಪಾಯಿನಂತೆ ಮೂರು ಪವನು ತೂಕದ

ಬೋರಿಕಾಯಿ ಸರವೊಂದನ್ನು ನನ್ನ ಹೆಂಡತಿಗೆ ಮಾಡಿಸಿಕೊಂಡೆ. ಅದೇ ವರ್ಷ ಪವನಿಗೆ ಹದಿಮೂರು ರೂಪಾಯಿ ಇದ್ದದ್ದು ಐವತ್ತಕ್ಕೇರಿತ್ತು. ಆ ಚಿನ್ನದ ಸರ ವನ್ನು ನಾನು ಕಾಯಿಲೆ ಬಿದ್ದಾಗ ಎಪ್ಪತ್ತೈದು ರೂಪಾಯಿಗೆ ಮಾರಾಟ ಮಾಡಿದೆ. ನಾನು ಕಡಿಮೆ ಖರ್ಚಿನಲ್ಲಿ ಮದುವೆಯಾದ್ದರಿಂದ ನನಗೇನೂ ನಷ್ಟವಾಗಲಿಲ್ಲ. ನಮ್ಮ ಪರಿಸ್ಥಿತಿಗೆ ಅಷ್ಟೇ ಸಾಕಾಗಿತ್ತು. ಸಾಲ ಮಾಡಿ ವಿಜೃಂಭಣೆಯ ಮದುವೆ ಮಾಡಿಕೊಳ್ಳುವುದು ಸರಿಯಲ್ಲ.

ಈಗ ಸಂಸಾರ ಜೀವನ ಆರಂಭ. ಇಬ್ಬರ ಖರ್ಚು ಬರಿಸಿಕೊಳ್ಳಬೇಕು. ನೇಯ್ಗೆ ಕಸುಬೇ ಏಕೈಕ ದಾರಿ. ಆದರೆ ಕೆಲವೇ ಸಮಯದಲ್ಲಿ ನನ್ನ ಲೆಕ್ಕಚಾರ ವೆಲ್ಲಾ ತಲೆಕೆಳಗಾಯಿತು. ನೇಯ್ಗೆ ಕಸುಬಿಗೇ ಕೊಡಲಿ ಪೆಟ್ಟುಬಿತ್ತು. ೧೯೪೫-೪೬ನೇ ಇಸವಿಯ ಸಮಯ. ಒಂದು ಕಡೆ ತೀವ್ರಗೊಂಡ ಸ್ವಾತಂತ್ರ ಚಳುವಳಿ. ಇನ್ನೊಂದೆಡೆ ೨ನೇ ಮಹಾಯುದ್ಧದ ಬಳಲಿಕೆಯಿಂದಾಗಿ ಭಾರತದ ಉತ್ಪಾದನಾ ವ್ಯವಸ್ಥೆಯೇ ಅಡಿಮೇಲಾಗಿತ್ತು. ಎಲ್ಲವೂ ತುಟ್ಟಿ. ನೇಯ್ಗೆಯ ವರಿಗೆ ನೂಲು ಸಿಗದಂತಾಯಿತು. ರೇಶನ್ ವಿಧಾನದಲ್ಲಿ ಸ್ವಲ್ಪ ಸ್ವಲ್ಪ ನೂಲು ವಿತರಣೆಗೊಳ್ಳುತ್ತಿತ್ತು. ಅಂತೂ 'ಪಾಪಿ ಹೋದಲ್ಲಿ ಮೊಣಕಾಲುದ್ದ ನೀರು' ಎಂಬ ಗಾದೆ ಮಾತಿನಂತಾಯಿತು ನನ್ನ ಪಾಡು.

ಬದುಕುವುದಕ್ಕಾಗಿ ಏನಾದರೂ ದಾರಿ ಹುಡುಕಲೇಬೇಕಾಗಿತ್ತು. ಬಹಳವಾಗಿ ಚಿಂತಿಸತೊಡಗಿದೆ. ಹೊಟ್ಟೆ ಹೊರೆಯುವುದೇ ಸಮಸ್ಯೆಯಾಯಿತು. ನನ್ನ ಹೆಂಡತಿಯ ಕಡೆಯವರೂ ಅಷ್ಟೇನೂ ಅನುಕೂಲಸ್ಥರಾಗಿರಲಿಲ್ಲ. ಕೃಷಿ ಉತ್ಪನ್ನ ಮಾರುಕಟ್ಟೆಗೆ ಸರಕು ಸಂಗ್ರಹಿಸುವ ಕೆಲಸ ಅವರದು. ಅಂದರೆ ಗೂಡ್ಸ್ ಲಾರಿಯಲ್ಲಿ ಹಳ್ಳಿಗಳಿಗೆ ಹೋಗಿ ಅಡಿಕೆ, ಬಾಳೆಕಾಯಿ ತುಂಬಿಸಿ ತರುವುದು. ಅವರು ಹಾಗೆ ಹೋಗುವಾಗ ಸರಕು ಲೋಡ್ ಮಾಡಲು ಜನ ಬೇಕಾಗುತ್ತಿತ್ತು. ನಾನೂ ಅವರೊಂದಿಗೆ ಹೋಗತೊಡಗಿದೆ. ಪುತ್ತೂರು, ಸುಳ್ಯ, ಚೊಕ್ಕಾಡಿ, ಕುಕ್ಕುಜಡ್ಕ, ಪಾಣಾಜೆ ಹೀಗೆ ಅನೇಕ ಹಳ್ಳಿಗಳನ್ನು ಸುತ್ತತೊಡಗಿದೆ. ನಿದ್ದೆ ಬಿಟ್ಟು ಲಾರಿ ಮೇಲೆ ಹೋಗಬೇಕು.ಹೊತ್ತಿಗೆ ಸರಿಯಾದ ಊಟವಿಲ್ಲ. ಈ ಕಸುಬು ನನಗೆ ಹಿಡಿಸಲಿಲ್ಲ. ನಮ್ಮ ಮಾವನವರೂ ಕಾಯಿಲೆಬಿದ್ದರು.

ಈ ನಡುವೆ ನನ್ನ ಕಷ್ಟ ತಿಳಿದುಕೊಂಡ ಯಾರೋ ಒಬ್ಬರು ಒಂದು ಸಿಹಿ ಸುದ್ದಿ ಕೊಟ್ಟರು.ಮಂಗಳೂರಿನ ಸೌತ್ ಕೆನರಾ ವಿಲ್ಲೇಜ್ ಇಂಡಸ್ಟ್ರೀಸ್ ಎಸೋಸಿಯೇಶನ್ (GKVIA) ನವರ ಖಾದಿ ಭಂಡಾರದಲ್ಲಿ ನೇಯ್ಗೆ ಮಾಡಲಾಗದೇ ತಿರಸ್ಕರಿಸಲ್ಪಟ್ಟ ನೂಲು ಸಂಗ್ರಹಿಸಿಟ್ಟಿದ್ದಾರೆ. ಬಯಸಿದ ವರಿಗೆ ಕೊಡಲು ಸಿದ್ಧರಿರುವುದಾಗಿಯೂ ತಿಳಿಯಿತು.

ನಾನು ತಡಮಾಡಲಿಲ್ಲ. ಖರ್ಚಿನ ಏರ್ಪಾಡು ಮಾಡಿಕೊಂಡು ತಕ್ಷಣವೇ ಮಂಗಳೂರಿಗೆ ಹೋದೆ. ವಿಚಾರ ನಿಜವಾಗಿತ್ತು. ಒಂದು ಪ್ರಯತ್ನ ಮಾಡಿಯೇ ತೀರುವುದಾಗಿ ಯೋಚಿಸಿ ಒಂದಷ್ಟು ನೂಲು ಪಡೆದುಕೊಂಡು ಮನೆಗೆ ಬಂದೆ. ಅವುಗಳನ್ನು ಬಳಸಿ ಸಿದ್ಧಮಾಡಿದ ಖಾದಿ ಬಟ್ಟೆಗಳನ್ನುಮತ್ತೆ ಖಾದಿ ಭಂಡಾರಕ್ಕೆ ಒಪ್ಪಿಸಿದೆ. ಅವರಿಗೆಲ್ಲಾ ಬಹಳ ಅಚ್ಚರಿ ಹುಟ್ಟಿಸಿತ್ತು. ತುಂಬಾ ಖುಷಿ ಪಟ್ಟು ಕೆಲಸ ಮುಂದುವರಿಸಿಕೊಂಡು ಹೋಗಲು ಸಹಕಾರ ನೀಡಿದರು. ನನ್ನ ವ್ಯವಹಾರ ಕ್ರಮ ಮತ್ತು ನನ್ನ ಉತ್ಪನ್ನದ ಗುಣಮಟ್ಟ ಅವರಲ್ಲಿ ಬಹಳ ವಿಶ್ವಾಸ ಮೂಡಿಸಿತ್ತು. ಆಗ ಸಂಘದ ಕಾರ್ಯದರ್ಶಿ ಗಳಾಗಿದ್ದ ಹಿರಿಯಡ್ಕ ಶ್ರೀ ನಾರಾಯಣ ರಾಯರು ಹೊಸ ಯೋಜನೆ ಯೊಂದನ್ನು ನನ್ನ ಮುಂದಿಟ್ಟರು. ಅಂತೆಯೇ ಬ್ರಹ್ಮಾವರದಲ್ಲಿ ಒಂದು ಖಾದಿ ಕೇಂದ್ರವನ್ನು ತೆರೆದು ನನ್ನನ್ನು ಮೆನೇಜರ್ ಮಾಡಿದರು. ಇದಲ್ಲದೇ ೭ ಮಗ್ಗಗಳನ್ನೂ ಒದಗಿಸಿಕೊಟ್ಟರು. ಇದರಿಂದ ನನ್ನಲ್ಲಿ ಹೆಚ್ಚಿನ ಜವಾಬ್ದಾರಿ ಬಂತು. ಕೆಲಸ ಗೊತ್ತಿದ್ದ ನೇಕಾರರನ್ನು ಸೇರಿಸಿಕೊಂಡೆ. ಬಹಳ ಜಾಗರೂಕತೆ ಯಿಂದ ನನ್ನ ಹೊಣೆಗಾರಿಕೆಯನ್ನು ನಿಭಾಯಿಸತೊಡಗಿದೆ.

ಕಚ್ಚಾಮಾಲು ತರಿಸಿಕೊಳ್ಳುವುದು, ನೇಕಾರರಿಗೆ ವಿತರಿಸಿ ಬಟ್ಟೆ ತಯಾರಿಸುವಂತೆ ಮಾಡುವುದು, ಗುಣಮಟ್ಟ ಕಾಯ್ದುಕೊಳ್ಳುವುದು ಜೊತೆಗೆ ನಾನೂ ನೇಯ್ಗೆ ಮಾಡಬೇಕಾಗಿತ್ತು. ಯೌವನದ ತುಂಬು ಉತ್ಸಾಹ. ಎರಡೇ ವರ್ಷಗಳಲ್ಲಿ ಉತ್ತಮ ಘಟಕವಾಗಿ ರೂಪುಗೊಂಡು ಎಲ್ಲವರ ಮೆಚ್ಚುಗೆಗೆ ಪಾತ್ರವಾಯಿತು. ನನ್ನ ಹೊಣೆಗಾರಿಕೆಯಲ್ಲಿ ಯಶಸ್ಸನ್ನುಕಂಡು ಮಂಗಳೂರಿನ ಮುಖ್ಯ ಕಛೇರಿಯಿಂದ ಇನ್ನೊಂದು ಯೋಜನೆ ಸಿದ್ಧವಾಯಿತು. ಮೂಡಬಿದ್ರೆ ಯಲ್ಲಿ ಇನ್ನೊಂದು ದೊಡ್ಡ ಖಾದಿ ಕೇಂದ್ರವನ್ನು ತೆರೆದು ಅಲ್ಲಿಯ ಹೊಣೆಗಾರಿಕೆ ನನಗೆ ವಹಿಸಿಕೊಟ್ಟರು. ಬ್ರಹ್ಮಾವರ ಘಟಕಕ್ಕೆ ಬೇರೊಬ್ಬರು ಬಂದರು. ಮೂಡಬಿದ್ರೆಯಲ್ಲಿ ಕೃಷಿ, ಗೋಶಾಲೆ ಮತ್ತು ಬಟ್ಟೆ ಕೇಂದ್ರಗಳು ಒಟ್ಟಾಗಿದ್ದುವು.

ಎರಡೇ ವರ್ಷದಲ್ಲಿ ಬ್ರಹ್ಮಾವರ ಖಾದಿ ಕೇಂದ್ರ ಬಿದ್ದುಹೋಯಿತು. ಮೂಡಬಿದ್ರೆಯಲ್ಲಿ ಮಾಲು ಉತ್ಪಾದನೆ ಕುಂಠಿತಗೊಂಡು ಬಹಳ ನಷ್ಟ ಅನುಭವಿಸಬೇಕಾಗಿ ಬಂತು. ನನ್ನಲ್ಲಿದ್ದ ಉಳಿಕೆಗಳಿಕೆ ಎಲ್ಲಾ ಬರಿದಾಗ ತೊಡಗಿತ್ತು. ಈಗ ಮನೆ ತುಂಬಿದ ಮಡದಿ-ಮಕ್ಕಳ ಹೊಟ್ಟೆ ತಣಿಸುವುದೇ ದೊಡ್ಡ ಸಮಸ್ಯೆಯಾಯಿತು. ನೇಯ್ಗೆ ಕಸುಬು ಮೈಗೆ ಬಟ್ಟೆ ನೀಡಿ ಮಾನ ಕಾಪಾಡಿದರೂ ಹೊಟ್ಟೆ ಹಸಿವನ್ನು ಇಂಗಿಸುವ ಸಾಮರ್ಥ್ಯ ಹೊಂದಿರಲಿಲ್ಲ.

ನಾನು ಬೇರೆಯೇ ದಿಕ್ಕಿನಲ್ಲಿ ಯೋಚಿಸತೊಡಗಿದೆ.

## ಅನ್ನ- ವಸ್ತ್ರಗಳ ದ್ವಿದಳ ಸೂತ್ರ

ಮತ್ತೆ ಗಾಂಧೀಜಿಯವರ ಸಿದ್ಧಾಂತಕ್ಕೆ ಶರಣುಹೋದೆ. ಬದುಕುವುದಕ್ಕಾಗಿ ಅನ್ನ-ವಸ್ತ್ರ ಎರಡನ್ನೂ ಉತ್ಪತ್ತಿ ಮಾಡುವುದನ್ನು ಕಲಿತುಕೊಳ್ಳಲೇಬೇಕೆಂದು ಗಾಂಧಿ ಹೇಳಿರುವುದು ನನಗೆ ಹೊಸ ದಾರಿ ತೋರಿಸಿಕೊಟ್ಟಿತು. ನಾನು ಇದುವರೆಗೆ ಕೇವಲ ವಸ್ತ್ರ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿದ್ದೇನೆಯೇ ಹೊರತು ಅನ್ನ ಉತ್ಪಾದನೆ ಮಾಡುತ್ತಿರಲಿಲ್ಲ. ನಾನು ಸೋತಿರುವುದು ಇಲ್ಲಿಯೇ ಎನ್ನುವುದು ಮನದಟ್ಟಾಯಿತು ಮತ್ತು ಅದನ್ನು ಸಾಧಿಸುವುದರ ಹೊರತು ನನ್ನ ಸಂಸಾರಕ್ಕೆ ಉಳಿಗಾಲವಿಲ್ಲವೆಂದು ಅನ್ನಿಸುತ್ತಿತ್ತು. ಆದರೆ ಅದು ಅಷ್ಟು ಸುಲಭದಲ್ಲಿ ಸಾಧಿಸುವಂತದ್ದಾಗಿರಲಿಲ್ಲ. ಆಹಾರ ಉತ್ಪಾದನೆಗೆ ನೆಲ-ಜಲ ಬಂಡವಾಳ ಬೇಕಾಗಿದ್ದು ಇದ್ಯಾವುದೂ ನನ್ನಲ್ಲಿದ್ದಿರಲಿಲ್ಲ.

## ಸ್ವಾವಲಂಬನೆಯ ಬದುಕು

ಅನ್ನ-ವಸ್ತ್ರ ಎರಡನ್ನೂ ತಾವೇ ಉತ್ಪಾದಿಸಿಕೊಳ್ಳುವುದರಲ್ಲಿಯೇ ಸ್ವಾವಲಂಬನೆಯ ಸಿದ್ಧಾಂತ ಹುದುಗಿಕೊಂಡಿದೆ. ಬರೇ ನೂಲುವುದರಿಂದ ನಮ್ಮ ಸಮಸ್ಯೆ ಪರಿಹಾರವಾಗುವುದಿಲ್ಲ. ನೂಲುವುದು ಒಂದು ಕೈಗಾರಿಕೆ. ಕೈಗಾರಿಕೆಗೆ ಕೃಷಿಯೇ ತಳಹದಿ. ಮನುಷ್ಯ ಭೂಮಿ ತಾಯಿಯನ್ನು ಬಿಟ್ಟು ದೂರ ಹೋದಷ್ಟು ಆತನ ಕಷ್ಟ ಹೆಚ್ಚುತ್ತಾ ಹೋಗುತ್ತದೆ ಎಂಬುದಾಗಿ ಗಾಂಧೀಜಿಯವರು ಹೇಳುತ್ತಿದ್ದರು. ಪರಿಪೂರ್ಣ ಸ್ವಾವಲಂಬನೆ ಸಾಧ್ಯವಿಲ್ಲದೇ ಹೋದರೂ ಬಹುಪಾಲು ಸ್ವಾವಲಂಬನೆ ಆಗಲೇಬೇಕು. ಆಗ ಮಾತ್ರ ಜನತೆ ಸುಖವಾಗಿರುವುದು ಸಾಧ್ಯ. ಅದಕ್ಕಾಗಿ ಜಮೀನು ಬೇಕು.

## ಸ್ವಾವಲಂಬನೆಗಾಗಿ ನೆಲದ ಆಸರೆ

ನನ್ನ ಹಿರಿಯರ ಭೂಮಿ ಇಲ್ಲವಾದುದರಿಂದ ಜಮೀನು ಖರೀದಿ ಮಾಡಬೇಕು. ದುಡ್ಡು ಕೊಡದೆ ಭೂಮಿ ಸಿಗಲಾರದು. ನನ್ನ ಕೈಯಲ್ಲಿ ಸ್ವಂತ ಹಣವಿರಲಿಲ್ಲ. ಮೂಡಬಿದ್ರೆಯಲ್ಲಿ ಜಮೀನಿಗಾಗಿ ಚೌಕಾಸಿ ಮಾಡಿದೆ. ಅದು ಸರಿಕೂಡಿ ಬರಲಿಲ್ಲ. ನಾನು ಭೂಮಿಗಾಗಿ ಕಷ್ಟಪಡುವ ವಿಚಾರ ಹೇಗೋ ಬಾವನಿಗೆ ತಿಳಿಯಿತು. ಚೇರ್ಕಾಡಿ ಸಮೀಪ ಸುಮಾರು ಎರಡೂವರೆ ಎಕರೆ

ವಿಸ್ತೀರ್ಣವುಳ್ಳ ಬಂಜರು ಭೂಮಿಯೊಂದು ಅವರ ಸ್ವಾಧೀನದಲ್ಲಿತ್ತು. ಅವರ ವಾಸದ ಭೂಮಿಯಿಂದ ದೂರದಲ್ಲಿದ್ದ ಕಾರಣ ಅಲ್ಲಿ ಕೃತಾವಳಿ ಮಾಡಿದ್ದಿರಲಿಲ್ಲ. ಸುತ್ತ ಆವರಣ ಇದ್ದರೂ ಆಸು-ಪಾಸಿನ ಜಾನುವಾರುಗಳು ಬಂದು ಮೇದು ಹೋಗುತ್ತಿದ್ದುವು. ಹೇಗೂ ಹಾಳುಬಿದ್ದಿರುವ ಭೂಮಿ ನನಗಾದರೂ ಕೊಟ್ಟರೆ ಹಸನು ಮಾಡುವ ಕನಸು ಕಾಣತೊಡಗಿದೆ. ಕೈಯಲ್ಲಿ ಹಣವಿಲ್ಲದೆ ಕೇಳುವುದಾದರೂ ಹೇಗೆ. ಮಡದಿ ಮಕ್ಕಳ ಹೊಟ್ಟೇ ತುಂಬಿಸುವುದೇ ಕಷ್ಟವಾಗಿತ್ತು. ಅವರಿವರಿಂದ ಕಾಡಿ ಬೇಡಿಯೇ ಒಲೆ ಉರಿಸಬೇಕಾದ ಪರಿಸ್ಥಿತಿ ನನ್ನದಾಗಿತ್ತು. ದಿನಬೆಳಗಾದರೆ ಮುಂದೇನು ? ಅನ್ನುವ ಚಿಂತೆ ನನ್ನದು. ಹಿಂದೊಮ್ಮೆ ಲಡಾಯಿ ಮಾಡಿ ದೂರವಾದವನು ಮತ್ತೆ ಬಾವನ ಮೊರೆ ಹೋಗುವುದಾದರೂ ಹೇಗೆಂಬ ದ್ವಂದ್ವದಲ್ಲಿದ್ದೆ. ಕೊನೆಗೊಂದು ದಿನ ಅವರನ್ನು ಕಂಡು ಹಣ ಕೊಡಲಿಕ್ಕೆ ನನ್ನಲ್ಲಿ ಇಲ್ಲ, ಮೂಲಗೇಣಿ ಮಾಡಿಕೊಡಿ ಅಂತ ಕೇಳಿದೆ. ಬಾವನವರು ಸಮಾಧಾನ ದಲ್ಲಿದ್ದರು. ನನ್ನ ಕೇಳಿಕೆಯಂತೆಯೇ ಮೂಲಗೇಣಿ ಮಾಡಿ ಭೂಮಿಯನ್ನು ನನ್ನ ಸ್ವಾಧೀನಕ್ಕೆ ಕೊಟ್ಟರು. ಹೀಗೆ ಎರಡೂವರೆ ಎಕ್ರೆಗೆ, ರೂಪಾಯಿ ಮೂರುವರೆಯಂತೆ ರೆಕಾರ್ಡು ಬರೆಯಲಾಯಿತು.

## ಇರುವುದಕ್ಕೆ ಸೂರಿನ ಚಿಂತೆ

ಇರುವುದಕ್ಕೆ ನೆಲ ದೊರೆಯಿತು. ನಮ್ಮ ಅದೃಷ್ಟಕ್ಕೆ ಆ ಭೂಮಿಯಲ್ಲಿ ಬೇರೇನೂ ಮಾಡದಿದ್ದರೂ ಒಂದು ಬಾವಿಯನ್ನು ಬಾವನೇ ತೋಡಿಸಿ ಟ್ಟಿದ್ದರು. ಅಲ್ಲಿಗೆ ಜಲ ಸಂಪನ್ಮೂಲವು ದೊರೆತಂತಾಯಿತು. ಆದರೆ ಯಾವುದೇ ಕಟ್ಟಡ ಇಲ್ಲದಿದ್ದ ಕಾರಣ ವಾಸಕ್ಕೆ ಮುಖ್ಯವಾಗಿ ಮಳೆ ಬಿಸಿಲಿ ನಿಂದ ರಕ್ಷಿಸಿಕೊಳ್ಳುವುದಕ್ಕೆ ಒಂದು ಮಾಡು ಮಾಡಿಕೊಳ್ಳಲೇ ಬೇಕಾಗಿತ್ತು. ಅದಕ್ಕಾಗಿ ಸುಲಭದ ವಿಧಾನ ಹುಡುಕತೊಡಗಿದೆ. ಆಸು-ಪಾಸಿನಲ್ಲೇ ನಾಲ್ಕಾರು ಕಂಬ ಸಂಗ್ರಹಿಸಿ ಸ್ವತಃ ಕಟ್ಟಡ ಕೆಲಸ ಆರಂಭಿಸಿದೆ. ಬಿದಿರು ಸಲಾಕೆ ಬಳಸಿ ಮಾಡು ಮಾಡಿ ಅಲ್ಲೇ ಸಿಕ್ಕಿದ ಮುಳಿ ಹುಲ್ಲು ಹೊದೆಸಿಬಿಟ್ಟೆ. ಇದ್ದ ಪುಡಿಕಾಸನ್ನೂ ಅಗತ್ಯಕ್ಕಾಗಿ ಖರ್ಚು ಮಾಡಿದೆ. ಅಂತೂ ೧೯೫೫ನೇ ಇಸವಿಯಲ್ಲಿ ಚೇರ್ಕಾಡಿಯಲ್ಲಿ ಮನೆ ಮಾಡಿಕೊಂಡೆ. ಜೊತೆಗೆ ಎರಡು ಮಗ್ಗ ಇಟ್ಟುಕೊಂಡು ಪರ್ಯಾಯ ಜೀವನ ಆರಂಭಿಸಿದೆ.

ನೇಯ್ಗೆಗೆ ನೂಲಿನ ಅಭಾವವಿತ್ತು. ಉಡುಪಿಯ ಶ್ರೀನಿವಾಸ ಪೈ ಗಳೆಂಬವರು ಸರ್ವೋದಯ ಕಾರ್ಯಕರ್ತರಿದ್ದರು. ತಾವು ತಯಾರಿ

ಸುತ್ತಿದ್ದ ನೂಲುಗಳನ್ನು ನನಗೆ ಕೊಟ್ಟು ಸಹಕರಿಸತೊಡಗಿದರು. ಅಂತೂ ಬಹಳ ಕಷ್ಟದ ಜೀವನ. ಆದರೂ ಒಂದು ಧೈರ್ಯ ಏನೆಂದರೆ ಮಗು ತಾಯಿಯಿಂದ ದೂರಹೋಗಿ ಕಂಗಾಲಾಗಿ ವಾಪಾಸು ತಾಯಿ ಬಳಿಗೆ ಬಂದಾಗ ಆ ಮಗುವಿಗೆ ತನ್ನ ತಾಯಿ ಬಗ್ಗೆ ಇರಬಹುದಾದ ಅಚಲ ನಂಬುಗೆ ನನಗೆ ಭೂಮಿಯ ಮೇಲಿತ್ತು. ನನ್ನನ್ನು ಕಷ್ಟದಿಂದ ಖಂಡಿತವಾಗಿಯೂ ಪಾರು ಮಾಡಬಲ್ಲಳೆಂಬ ಧೈರ್ಯ ಆಗ ನನಗಿತ್ತು. ಹಾಗಾಗಿಯೇ ಕೃಷಿಯಲ್ಲಿ ನಂಬಿಕೆ ಇಟ್ಟೆ. ಇದರಿಂದಲೇ ಮನಸ್ಸಿಗೆ ನೆಮ್ಮದಿ ಎಂದು ಭಾವಿಸಿದ್ದೆ. ಸ್ವಂತ ಜಮೀನಿನಲ್ಲಿ ತನಗೆ ನನ್ನ ಪರಿಶ್ರಮದಿಂದಲೇ ಸಂಸಾರಕ್ಕೆ ಬೇಕಾಗುವಷ್ಟು ಅಕ್ಕಿ ಬೆಳೆಸಲು ನಿರ್ಧರಿಸಿದೆ.

## ಭತ್ತ ಬೇಸಾಯ

ಇದ್ದ ಜಮೀನಿನಲ್ಲಿ ಸೂಕ್ತ ಎನಿಸಿದ್ದ ಭಾಗದಲ್ಲಿ ಭತ್ತ ಬೇಸಾಯ ಆರಂಭಿಸಿದೆ. ಆದರೆ ಏನೂ ಫಲ ಕಾಣಲಿಲ್ಲ, ನನಗೂ ಈ ಬಗ್ಗೆ ಏನೇನೂ ಅನುಭವ ಇದ್ದಿರಲಿಲ್ಲ. ಏರು-ತಗ್ಗಿನ ಬೋಳು ಗುಡ್ಡವಾದುದರಿಂದ ಭತ್ತದ ಸಸಿಯ ಬುಡದಲ್ಲಿ ನೀರು ನಿಲ್ಲಿಸುವುದು ಅಸಾಧ್ಯವಾಗಿತ್ತು. ಆಸು-ಪಾಸಿನವರು ನನ್ನ ಬೇಸಾಯ ಕಂಡು ಅಪಹಾಸ್ಯ ಮಾಡುತ್ತಿದ್ದುದನ್ನು ಗಮನಿಸಿದೆ.



ನಾನು ಸೋತು ಹೋಗಿದ್ದೆ. ನನ್ನ ಬಾವ 'ಅವ ಮರ್ಲ' ಎಂದು ನನ್ನ ಬಗ್ಗೆ ಹೇಳುತ್ತಿದ್ದರು. ನಾನು ಏರಿ ಮಾಡಿ ಭತ್ತ ಬೆಳೆಯುತ್ತಿರುವುದನ್ನು ಕಂಡು ನಮ್ಮ ನೆರೆಯ ಕೊರಗ ಶೆಟ್ರಲ್ಲಿ, 'ನಮ್ಮ ಮಾಣಿ ಮಾಡ್ಲಿ ಕಾಂಬ ಎನ್ನುತ್ತಿದ್ದರು' ಬಳಿಕ ಸಿಂಡಿಕೇಟ್ ಬ್ಯಾಂಕಿನ ಅಧಿಕಾರಿಗಳು, ತಜ್ಞರು ಭೇಟಿ ಮಾಡಿದಾಗ ಈ ಜನ ಆಶ್ಚರ್ಯಪಟ್ಟರು. ಅದು ಅವರಿಗೇ ಸೈ, ನಮ್ಮಂತವರಿಗೆ ಆಗ ಎಂದು ಗೊಣಗತೊಡಗಿದರು.

ಭತ್ತ ಬೇಸಾಯ ವಿಫಲವಾಗುತ್ತಿದ್ದಂತೆ ಅನ್ನ ಬೆಳೆಸುವುದು ಕಷ್ಟದ ಆಲೋಚನೆಯಾಯಿತು. ಈ ನಡುವೆ ಹೊಸ ಲೆಕ್ಕಾಚಾರ ಹಾಕಿ ಬೇರೆ ಸಾಧ್ಯತೆ ಗಳನ್ನು ಹುಡುಕತೊಡಗಿದೆ. ಬಾಳೆ, ಪಪ್ಪಾಯಿ ಮುಂತಾದುವುಗಳಿಗೆ ಬುಡಕ್ಕೆ ಸ್ವಲ್ಪ ನೀರು ಹಾಕಿದರೂ ಸಾಕು ಹಾಗಾಗಿ ಅವುಗಳನ್ನು ನೆಡತೊಡಗಿದೆ. ಬಾವಿ ಯಿಂದ ನೀರು ಎಳೆದು ಅವುಗಳಿಗೆ ನೀರುಣಿಸುತ್ತಿದ್ದೆ.

## ಸರ್ವೋದಯ ರಾಟೆಯ ಹುಟ್ಟು

ಬಾಳೆ, ಪಪ್ಪಾಯಿ ಗಿಡಗಳಿಗೆ ನೀರು ಎಳೆದು ಹಾಕುವುದೇ ನನ್ನ ಮುಖ್ಯ ಕೆಲಸ ವಾಗತೊಡಗಿತು. ದಿನದ ಬಹುಭಾಗ ಅದಕ್ಕಾಗಿ ಮೀಸಲಿಡಬೇಕಾಯಿತು. ಏಕೆಂದರೆ ಗುಡ್ಡದ ಒಣ ಭೂಮಿಯನ್ನು ಮೆದು ಮಾಡುವುದು ಸುಲಭ ವಿರಲಿಲ್ಲ. ನೈಗೆ ಕೆಲಸಕ್ಕೂ ಇದರಿಂದ ಹೊಡೆತ ಬೀಳತೊಡಗಿತು. ನಮ್ಮದು ಸುಮಾರು ೫೦ ಅಡಿ ಆಳದ ಬಾವಿ ಹಗ್ಗದ ಸಹಾಯದಿಂದ ಕೊಡಪಾನದಲ್ಲಿ ನೀರು ತುಂಬಿಸಿ ಮೇಲೆಳೆಯಬೇಕು. ಬಹಳ ಹೊತ್ತು ಹೀಗೆ ಮಾಡಿದ ಬಳಿಕ ದೇಹ ಹಿಂಡಿದಂತಾಗಿ ಕುಸಿದು ಬೀಳುವಂತಾಗುತ್ತಿತ್ತು. ಬೇಸಗೆಯ ದಗೆ ಬೇರೆ. ಎಷ್ಟು ನೀರು ಸುರಿದರೂ ಗಿಡಗಳು ಒಣಗುತ್ತಿದ್ದುವು. ಇದನ್ನು ಕಂಡು ಮನಸ್ಸು ಕೂಡಾ ಕುದಿಯುತ್ತಿತ್ತು. ಬಿಸಿಲು ಹೆಚ್ಚಾದಂತೆ ನೈಗೆ ಕೆಲಸ ಮಾಡುತ್ತಿದ್ದೆ. ಎರಡೂ ದೇಹದಂಡನೆಯ ಕೆಲಸ. ದೈಹಿಕ ಶ್ರಮ ಬಹಳಷ್ಟು ವ್ಯಯವಾಗುತ್ತದೆ. ಕ್ರಮೇಣ ಕೆಲಸ ಮಾಡುತ್ತಿದ್ದಂತೆ ಎದೆನೋವು ಕಾಣಿಸಿ ಕೊಂಡಿತು. ಬೆನ್ನುಹುರಿ ಮೂತ್ರಕೋಶದ ತೊಂದರೆಯೂ ಕಾಣಿಸತೊಡಗಿತು. ನನ್ನ ಹೆಂಡತಿ ಮಕ್ಕಳ ಗೋಳು ಕೂಡಾ ಹೆಚ್ಚಾಯಿತು.

ವೈದ್ಯಕೀಯ ಚಿಕಿತ್ಸೆ ಮಾಡಿಸಿಕೊಳ್ಳದಿದ್ದರೆ ನನಗೆ ಉಳಿಗಾಲವಿಲ್ಲ ವೆನ್ನುವ ಹಂತಕ್ಕೆ ತಲುಪಿದಾಗ ಯಾರದೋ ಸಲಹೆ ಮೇರೆಗೆ ವೈದ್ಯರನ್ನು ಭೇಟಿ ಮಾಡಿದೆ. ಯಾವುದೋ ಗಂಭೀರ ಕಾಯಿಲೆ ಬಗ್ಗೆ ವೈದ್ಯರು ಚಿಕಿತ್ಸೆ ಆರಂಭಿಸಬಹುದೆಂದು ನಾನು ನಿರೀಕ್ಷಿಸಿದ್ದೆ. ಬಹಳ ಗಂಭೀರವಾಗಿ ವೈದ್ಯರು

ಪರೀಕ್ಷಿಸತೊಡಗಿದರು. ನನ್ನ ಆತಂಕ ಹೆಚ್ಚಾಗುತ್ತಿತ್ತು. ಜೊತೆಗೆ ಹಣದ ಅಡಚಣೆಯಲ್ಲಿದ್ದೆ. ಕೊನೆಗೆ ವೈದ್ಯರು ನಿಮಗೆ ಯಾವುದೇ ಕಾಯಿಲೆ ಇಲ್ಲವೆಂದು ಹೇಳಿಬಿಟ್ಟರು. ನನ್ನ ಆತಂಕ ಇನ್ನೂ ಹೆಚ್ಚಾಯಿತು. ಏಕೆಂದರೆ ನನ್ನ ದೇಹದ ತೊಂದರೆಗಳು ನನ್ನನ್ನು ಇನ್ನೂ ಬಾಧಿಸುತ್ತಿದ್ದವು. ನನ್ನ ಚಿಂತೆ ಹೆಚ್ಚಾಗತೊಡಗಿತು. ಹಾಗಾಗಿ ಮಂಗಳೂರಿನಲ್ಲಿದ್ದ ಪ್ರಸಿದ್ಧ ಆಯುರ್ವೇದ ಪಂಡಿತರ ಮೊರೆಹೋದೆ. ಪಂಡಿತ ನೀಲಕಂಠ ಶಾಸ್ತ್ರಿಗಳು ನನ್ನ ದಿನಚರಿಯ ಹಿನ್ನೆಲೆ ವಿವರ ತಿಳಿದುಕೊಂಡು ಮಿತಿ ಮೀರಿದ ದೈಹಿಕ ಶ್ರಮ ವಿನಿಯೋಗವೆ ನನ್ನಕಾಯಿಲೆಗಳಿಗೆ ಮೂಲ ಕಾರಣವಿರಬಹುದೆಂದು ಮನದಟ್ಟು ಮಾಡಿದರು. ಮೂತ್ರಕೋಶದ ತೊಂದರೆಗೆ ಐದಾರು ತಿಂಗಳ ದೀರ್ಘ ಔಷಧ ಪ್ರಯೋಗ ವಾಗಿ ಕಾಯಿಲೆ ವಾಸಿಯಾಯಿತು. ಕಾಯಿಲೆ ವಾಸಿಯಾದರೂ ಬಾವಿಯಿಂದ ನೀರೆತ್ತುವ ಧೈರ್ಯ ಬರಲಿಲ್ಲ. ಈ ನೀರೆತ್ತುವ ಕೆಲಸದಿಂದಾಗಿ ಮತ್ತೆ ದೈಹಿಕ ತೊಂದರೆಗೊಳಗಾಗಬಹುದೆಂಬ ಭಯ. ಅಂತೂ ನನ್ನ ಸ್ವಾವಲಂಬನೆಯ ತತ್ವ ನೀರು ಪಾಲಾಯ್ತೆಂದು ಭಾವಿಸಿದೆ. ಆದರೂ ಮನಸ್ಸು ಸುಮ್ಮನಿರುತ್ತಿರಲಿಲ್ಲ. ಏನಾದರೂ ಉಪಾಯ ಹುಡುಕಲು ಹವಣಿಸುತ್ತಿತ್ತು.

ಗುರಿ ಸಾಧಿಸಬೇಕೆಂದು ಮನಸಾರೆ ಆಲೋಚಿಸಿ ಕೆಲಸ ಆರಂಭಿಸಿದರೆ ಖಂಡಿತಾ ಅದು ಸಾಧ್ಯವಾಗುತ್ತದೆ. ಸ್ವಾಮಿ ವಿವೇಕಾನಂದರು ಒಂದು ವಿಚಾರ ಹೇಳಿದ್ದರು; ಈ ಪ್ರಕೃತಿಯಲ್ಲಿ ಅತಿ ದೊಡ್ಡ ಸಮಸ್ಯೆ ತಲೆ ಎತ್ತಿದಾಗ ನಾವು ಹಗಲೂ ರಾತ್ರಿ ಪರಿಹಾರಾತ್ಮಕವಾಗಿ ಯೋಚಿಸುತ್ತಿದ್ದರೆ, ಇದೇ ಪ್ರಕೃತಿಯು ಪರಿಹಾರ ತೋರಿಸಿಕೊಡುತ್ತಾಳೆ. ನಾನು ನನ್ನ ಸಮಸ್ಯೆಗೆ ಪರಿಹಾರ ಹುಡುಕ ತೊಡಗಿದೆ. ಯಾವುದಾದರೂ ತಂತ್ರಸಾಧನವೊಂದರ ಸಹಾಯದಿಂದ ಶ್ರಮ ಉಳಿಕೆ ಮಾಡಲೇಬೇಕಾಗಿತ್ತು. ಅದು ನನ್ನ ದೇಹ ಪರಿಸ್ಥಿತಿಗೆ ಸರಿಹೊಂದು ವಂತಿರಬೇಕು. ನಿಧಾನವಾಗಿ ರಾಟೆಯ ಗಾತ್ರವನ್ನು ದೊಡ್ಡದು ಮಾಡಲು ಯೋಚಿಸಿದೆ. ನಾನು ಮಗ್ಗಕ್ಕೆ ಹಾಸುಹಾಕುವ ಮೊದಲು ನೂಲು ಬಿಡಿಸಲು ಒಂದು ದೊಡ್ಡ ಚೌಕಟ್ಟನ್ನು ಬಳಸುತ್ತಿದ್ದೆವು ಅದರ ಒಂದು ಸುತ್ತಿನಲ್ಲಿ ಮಾರುದ್ದ ನೂಲು ಸುರುಳಿಯಾಗುತ್ತಿತ್ತು. ಇಂತದ್ದೇ ಸಾಧನವನ್ನು ರಾಟೆಯ ರೂಪದಲ್ಲಿ ಬಳಕೆಯಾದರೆ ಅನುಕೂಲವೆಂದು ಯೋಚಿಸಿ, ಒಣ ಮರದ ಗೆಲ್ಲುಗಳಲ್ಲಿ ಕೈ ತೋರದವುಗಳನ್ನು ಆಯ್ದು ಹಗ್ಗದ ಸಹಾಯದಿಂದ ಸಿಲಿಂಡರಿನ ರೂಪಕ್ಕೆ ತಂದೆ. ಬಹಳ ಹಗುರವಾಗಿದ್ದುದು ಅನುಕೂಲ ವಾಯಿತು. ನಡುವಿನಲ್ಲಿ ಎರಡೂ ಬದಿಗೆ ಚಾಚಿದಂತೆ ತಿರುಗಿಸಲು ಸರಿಹೊಂದುವ ರೀತಿಯ ಹಿಡಿಕೆ ಜೋಡಿಸಿಕೊಂಡೆ.



ಬಾವಿ ಕಟ್ಟೆಗೆ ಅಡ್ಡವಾಗಿ ಸಾಕಷ್ಟು ಮರದ ದಿಂಡುಗಳನ್ನು ಹಾಸಿ ಅವುಗಳ ಮೇಲೆ ಸೊಂಟದೆತ್ತರಕ್ಕೆ ಇನ್ನೆರಡು ಅಡ್ಡಗಳನ್ನಿರಿಸಿ ನನ್ನ ಹೊಸ ರಾಟೆಯನ್ನು ಅದರ ಮೇಲೆ ಕೂರಿಸಿದೆ. ಈ ಅಡ್ಡಗಳಲ್ಲಿ ರಾಟೆಯ ಹಿಡಿಕೆ ಕೂರುವಲ್ಲಿ ತಿರುಗಲು ಅನುಕೂಲವಾಗುವಂತೆ ಅರ್ಧಚಂದ್ರಾಕೃತಿಯ ಸಾಧನವಿತ್ತು. ಹಿಡಿಕೆಯನ್ನು ಬಳಸಿ ವೃತ್ತಾಕಾರವಾಗಿ ತಿರುಗಿಸಿದರೆ ಈ ಸಾಧನದ ಮೇಲೆ ರಾಟೆ ಎರಡೂ ಮಗ್ಗುಲುಗಳಲ್ಲಿಯೂ ತಿರುಗುವಂತಿತ್ತು.

ಹಗ್ಗವೊಂದರ ಎರಡೂ ಬದಿಗಳಲ್ಲಿಯೂ ಬಾಲ್ದಿಗಳನ್ನು ಕಟ್ಟಿ ಹಗ್ಗವನ್ನು ರಾಟೆಗೆ ಸುತ್ತಿಬಿಡುವುದು. ಸುತ್ತುವಾಗ ಒಂಧು ಬಾಲ್ದಿ ನೀರಿನ ಮಟ್ಟದಲ್ಲಿ ಮುಳುಗಿರುವಂತೆಯೂ ಇನ್ನೊಂದು ಬಾಲ್ದಿ ರಾಟೆಯ ಮೇಲ್ಭಾಗದಲ್ಲಿಯೂ ನಿಲ್ಲುವಂತೆ ಹಗ್ಗವನ್ನು ಸರಿ ಹೊಂದಿಸಿರಬೇಕು. ರಾಟೆಯ ಕೆಳಗೆ ಒಂದು ಅಗಲವಾದ ಮತ್ತು ಹಗುರವಾದ ತೊಟ್ಟಿಯಾಕಾರದ ಸಾಧನವನ್ನು ಇರಿಸಿ ಅದರ ಇನ್ನೊಂದು ಬದಿ ಬಾವಿ ಕಟ್ಟೆಯನ್ನು ಹಾದು ಹೊರಬರುವಂತೆ ಇಳಿಜಾರಿನಂತಿದ್ದರೆ ರಾಟೆಯ ಮೇಲ್ಭಾಗಕ್ಕೆ ಬಂದ ಬಾಲ್ದಿಯು ಅಡ್ಡವಾಗಿ ಬಾಗಿದಾಗ ಅದರಲ್ಲಿದ್ದ ನೀರು ರಾಟೆಯ ಮೇಲೆ ಸುರಿಯಲ್ಪಟ್ಟು ಅದರ ಕೆಳಗಿರುವ ತೊಟ್ಟಿಗೆ ಬೀಳುತ್ತದೆ. ಅಲ್ಲಿಂದ ಹರಿದು ಬಂದ ನೀರು ಬಾವಿಯ ಹೊರಭಾಗಕ್ಕೆ ಬರುತ್ತದೆ.

ಇದೇ ಹೊತ್ತಿಗೆ ಹಗ್ಗದ ಇನ್ನೊಂದು ಕೊನೆಯಲ್ಲಿ ಕಟ್ಟಲಾಗಿರುವ ಬಾಲ್ದಿಯಲ್ಲಿ ನೀರು ತುಂಬುತ್ತಿರುತ್ತದೆ. ಮೇಲಿನ ಬಾಲ್ದಿಯ ನೀರು ಪೂರ್ತಿ ಸುರಿದ ಬಳಿಕ ಅದನ್ನು ಕೆಳಗೆ ಇಳಿಸಬೇಕು. ಆಗ ಕೆಳಗೆ ನೀರು ತುಂಬುತ್ತಿದ್ದ ಬಾಲ್ದಿಯು ಮೇಲಕ್ಕೆ ಬರುತ್ತದೆ. ಇದೇ ರೀತಿಯಲ್ಲಿ ರಾಟೆಯನ್ನು ಹಿಡಿಕೆಯ ಸಹಾಯದಿಂದ ಎರಡೂ ಮಗ್ಗುಲುಗಳಲ್ಲಿ ಚಲಿಸುವಂತೆ ಮಾಡಬಹುದಾಗಿದೆ.

## ಸರ್ವೋದಯ ರಾಟೆಯ ಸಾಮರ್ಥ್ಯ

ಒಂಟಿ ಕೊಡ ಬಳಸಿ ನೀರೆಳೆಯುವುದಕ್ಕಿಂತ ಈ ವಿಧಾನವು ಹೆಚ್ಚು ಪರಿಣಾಮಕಾರಿ. ಒಂದೇ ಪ್ರಕ್ರಿಯೆಯಲ್ಲಿ ಎರಡು ಪಟ್ಟು ಕೆಲಸವಾಗುತ್ತದೆ. ಇದರಿಂದ ಎತ್ತಲ್ಪಡುವ ನೀರಿನ ಪ್ರಮಾಣವೂ ಅಧಿಕವಾಗಿರುತ್ತದೆ. ದೊಡ್ಡ ರಾಟೆ ಬಳಸುವುದರಿಂದ ನೀರಿನ ಚಲನೆಯ ವೇಗವು ಹೆಚ್ಚುತ್ತದೆ. ರಾಟೆ ಚಲಿಸುವಂತೆ ಮಾಡುವುದು ಹಗ್ಗ ಬಳಸುವ ಕ್ರಮಕ್ಕಿಂತ ಬಹು ಪಾಲು ಕಡಿಮೆ. ಇದರಿಂದಾಗಿ ದೈಹಿಕ ಬಳಲಿಕೆ ಬಹಳಷ್ಟು ಕಡಿಮೆಯಾಗುತ್ತದೆ. ಶ್ರಮದ ವಿನಿಯೋಗದಲ್ಲಿ ಉಳಿಕೆಯಾಗುವುದು. ನನ್ನ ಪರಿಸ್ಥಿತಿಗೆ ಇದು ಬಹಳ ಸೂಕ್ತವಾಗಿ ಕಂಡಿತು. ನಾನು ಒಬ್ಬನೇ ಕೂಡಾ ಇದನ್ನು ಬಳಸಬಲ್ಲೆ. ಇನ್ನೊಂದು ಬದಿಯಲ್ಲಿ ಜೊತೆಗೊಬ್ಬರಿದ್ದರೆ ದಿನವಿಡೀ ನೀರು ಸೇದುತ್ತಿದ್ದರೂ ದಣಿವಾಗುವುದಿಲ್ಲ. ಈ ಸರಳಯಂತ್ರದ ಸಹಾಯದಿಂದ ಗಂಟೆಯೊಂದರ ಅವಧಿಯಲ್ಲಿ ೩೦೦ ರಿಂದ ೪೦೦ ಡಬ್ಬಿ ನೀರು ೫೦ಅಡಿ ಆಳದಿಂದ ಎತ್ತಬಹುದು. ಮಕ್ಕಳು, ಮಹಿಳೆಯರಿಗೂ ಸಹ ಇದು ಸಾಧ್ಯ.

## ಚೇರ್ಕಾಡಿ ಮಾದರಿ ಭತ್ತ ಬೇಸಾಯದ ಹುಟ್ಟು

ನೀರೆತ್ತುವ ರಾಟೆಯ ಸಹಾಯದಿಂದ ನನ್ನ ಕೃಷಿ ಚಟುವಟಿಕೆಗೆ ಹೊಸ ಚಾಲನೆ ಬಂತು. ನನ್ನ ಉತ್ಸಾಹ ಹೆಚ್ಚಿತು. ಇತರ ಕೆಲಸಗಳಿಗೂ ಸಮಯ ದೊರೆಯ ತೊಡಗಿತು. ಹೀಗಿದ್ದರೂ ಭತ್ತ ಬೆಳೆಯುವ ಕನಸು ಕಂಡ ನನಗೆ ಅದು ಸಾಧ್ಯವಾಗದೇ ಹೋದ ಬಗ್ಗೆ ಬೇಸರವಿತ್ತು. ಆದರೇನು ಮಾಡುವುದು ಈ ಮಣ್ಣಿನ ಸಾಮರ್ಥ್ಯವೇ ಇಷ್ಟೆಂದು ತೃಪ್ತಿಪಡುವಂತಿರಲಿಲ್ಲ. ಏಕೆಂದರೆ ನನಗೆ ಮೊದಲೇ ತಿಳಿದಿದೆ ಇದುವರೆಗೆ ಇಂತಹ ಜಮೀನಿನಲ್ಲಿ ಭತ್ತ ಬೆಳೆದವರಿಲ್ಲ. ಬೆಳೆಯುವುದು ಸಾಧ್ಯವೆಂದು ನಂಬಿದವರು ಇಲ್ಲ. ಹಾಗಾದರೆ ಅದು ಪವಾಡವೇ ಸರಿ. ಅಂದ ಮಾತ್ರಕ್ಕೆ ಇತರ ಸಾಧ್ಯತೆಗಳನ್ನು ಅಲ್ಲಗಳೆಯುವುದೂ ಸೂಕ್ತವಲ್ಲ. ನಮ್ಮ ತಿಳುವಳಿಕೆಯನ್ನು ಹೆಚ್ಚಿಸಿಕೊಂಡು ಹೊಸ ವಿಧಾನ ಹುಡುಕುವುದೇ ಸರಿಯಾದ ದಾರಿ ಎಂದು ತೀರ್ಮಾನಿಸಿದೆ.

ನಾನಾದರೂ ಪರ್ವತದ ತುದಿಯಲ್ಲಿ ಬೇಸಾಯ ಆರಂಭಿಸಿದವ. ಒಂದು ವೇಳೆ ಗ್ರಾಮದೊಳಗೆ ಇರುವ ಬೈಲು ಗದ್ದೆಗಳಾದರೂ ನನ್ನಲ್ಲಿರುತ್ತಿದ್ದರೆ ಬೆಳೆದುಣ್ಣಬಹುದಿತ್ತು. ಕನಿಷ್ಠ ಮಕ್ಕಿ ಗದ್ದೆಗಳಾದರೂ ಇರುತ್ತಿದ್ದರೆ ಎಂಬ ಯೋಚನೆ ಬರುತ್ತಿತ್ತು. ನಮ್ಮ ದಿನಚರಿಯಲ್ಲಿ ಬಾಳೆಹಣ್ಣು ಮರಗೆಣಸು, (ಬರಗಾಲ ಗೆಡ್ಡೆ) ಪಪ್ಪಾಯಿ, ಅನಾನಸು, ಮಾವು, ಹಲಸಿನ ಹಣ್ಣು, ಪೇರಳೆ,ಚಿಕ್ಕು ಮುಂತಾದ ತೋಟಗಾರಿಕಾ ಬೆಳೆಗಳು ಹೆಚ್ಚು ಬಳಕೆಯಾಗುತ್ತಿದ್ದು ಅನ್ನ ಮತ್ತು ಅಕ್ಕಿ ಮೂಲದ ಆಹಾರ ಪದಾರ್ಥ ಬಹಳ ಕಡಿಮೆ ಪ್ರಮಾಣದಲ್ಲಿತ್ತು. ಅಂತೂ ಹೊಟ್ಟೆ ತುಂಬುತ್ತಿದೆಯಲ್ಲಾ ಎಂಬ ನೆಮ್ಮದಿ ಇತ್ತು. ಪ್ರಾಚೀನ ಮಾನವ ಕಾಡಿನ ಉತ್ಪನ್ನಗಳ ಆಧಾರದಲ್ಲೇ ಜೀವಿಸುತ್ತಿದ್ದ. ನಾನು ಕನಿಷ್ಠ ಬೆಳೆಸಿ ತಿನ್ನುವ ಸ್ಥಿತಿಯಲ್ಲಿರುವುದೇ ನನ್ನ ನೆಮ್ಮದಿ. ಭತ್ತ ಆಗದಿದ್ದರೇನಾಯಿತು, ಉಳಿದವುಗಳಾದರೂ ಹುಲುಸಾಗಿ ಬೆಳೆಯುತ್ತವೆಯಲ್ಲಾ ಎಂದು ಸಮಾಧಾನ ತಂದುಕೊಳ್ಳುತ್ತಿದ್ದೆ. ಆದರೂ ಈ ನೆಲದಲ್ಲೊಂದು ಭತ್ತ ತೆನೆಯಾಗುತ್ತಿದ್ದರೆ ಎಂಬ ಆಸೆ ಆಳದಲ್ಲಿ ಮನೆಮಾಡಿತ್ತು.

ಒಂದು ದಿನ ಮೆಣಸಿನ ಏರಿ ಮೇಲೆ ನನಗೊಂದು ಆಶ್ಚರ್ಯ ಕಾದಿತ್ತು. ಅಲ್ಲಿ ಹೇಗೋ ಬಿದ್ದು ಹುಟ್ಟಿದ ಭತ್ತದ ಸಸಿಯೊಂದು ಪುಷ್ಟಿಯಾಗಿ ಬೆಳೆಯುತ್ತಿತ್ತು. ಹೇಗೂ ಮೆಣಸಿಗಾಗಿ ಹಾಕಿದ ಗೊಬ್ಬರದ ಹುಡಿ, ಬೂದಿ ಅದಕ್ಕೂ ದೊರೆತಿರಬೇಕು.

ಇತರ ಕಳೆ ಕೀಳುವ ಹೊತ್ತಲ್ಲೂ ಈ ಸಸಿಯನ್ನು ಕಿತ್ತೆಸೆವ ಮನಸ್ಸು ಬರಲಿಲ್ಲ. ಬಾ ಎಂದು ಪರಿತಪಿಸಿದಾಗ ಬರಲಿಲ್ಲ.ಇಂದು ಕರೆಯದೇ ಬಂದ ಸಸಿಯಾದರೂ ಪ್ರೀತಿಯಿಂದ ಬದುಕಲು ಬಿಟ್ಟೆ. ಮತ್ತೊಮ್ಮೆ ಗೊಬ್ಬರ ಕೊಡುವ ಹೊತ್ತಲ್ಲಿ ಸಾಲಲ್ಲಿ ಕುಳಿತ ಆ ಸಸಿಗೂ ಒಂದಿಷ್ಟು ಹೆಚ್ಚಿಗೆ ಗೊಬ್ಬರ ಕೊಟ್ಟೆ. ಬೆಳೆಯುತ್ತಾ ತಾನು ಕುಟ್ಟಿಕಾಯಮೆ - ಊರಿನ ಭತ್ತ ಎಂದು ಸಾರತೊಡಗಿತು. ಒಂದಿದ್ದ ಸಸಿ ಎರಡಾಗಿ, ನಾಲ್ಕಾಗಿ ಕೊನೆಗೆ ೧೬ ಕವಲುಗಳಾಗಿ ಪುಷ್ಕಳ ಬೆಳೆಯಾಯಿತು. ತನ್ನ ೧೬ ಕವಲುಗಳಲ್ಲಿ ಅಷ್ಟೇ ಕೊರಳುಗಳಲ್ಲಿ ತೆನೆಯಾಯಿತು. ಸಂತಸ ಹಾಗೂ ಕುತೂಹಲದಿಂದಲೇ ಬೆಳೆಯನ್ನು ಅಳೆದು ನೋಡಿದೆ. ಭರಾಬರಿ ಅರ್ಧಪಾವು ಭತ್ತವಾಯಿತು. ಬಹಳ ಸಮಯಗಳಿಂದ ನನ್ನ ಕುತೂಹಲದ ಕೇಂದ್ರವಾಗಿದ್ದ ಈ ಸಸಿಯೇ ತೋರಿಸಿಕೊಟ್ಟ ದಾರಿ ನನಗೆ ಭಾಗ್ಯದ ಬಾಗಿಲು ತೆರೆದಂತಾಯಿತು. ಅದಾಗಿಯೇ ಬಂದ ಲಕ್ಷ್ಮಿ ಎಂದು ಮನಸಿನಲ್ಲೇ ಅಂದುಕೊಂಡೆ.

ಇಲ್ಲಿ ಒಂದು ಸಸಿ ಆರೋಗ್ಯವಾಗಿ ಬೆಳೆದು ಫಲಕೊಡುವುದಾದರೆ ಹೆಚ್ಚೇಕೆ ಸಾಧ್ಯವಿಲ್ಲ? ಎಂಬುದಾಗಿ ನನ್ನ ಮನಸ್ಸು ಓಡುತ್ತಿತ್ತು. ದೊರೆತ ಅದೇ ಅರ್ಧ ಪಾವು ಬೀಜಗಳನ್ನು ಬಂಗಾರದ ನಾಣ್ಯಗಳೆಂದುಕೊಂಡು ಮತ್ತೆ ಸಸಿ ಮಾಡಿದೆ. ಮೆಣಸಿಗೆ ಏರಿ ಮಾಡಿದ್ದ ರೀತಿಯಲ್ಲೇ ಏರಿ ಮಾಡಿ ಅಲ್ಲಿ ಮೆಣಸಿನ ಬದಲಿಗೆ ಉದ್ದಕ್ಕೂ ಭತ್ತದ ಸಸಿ ಹಾಕಿದೆ. ಪ್ರಾಯೋಗಿಕವಾಗಿ ಮಾಡಿದ ಒಂದು ಸೆಂಟ್ಸು ವಿಸ್ತಾರದಲ್ಲಿ ೧೪ಕಿಲೋ ಅಕ್ಕಿ ಬೆಳೆಯಿತು. ಅದೇ ರೀತಿ ಸುಮಾರು ೩೦ ಸೆಂಟ್ಸು ವಿಸ್ತಾರದಲ್ಲಿ ಭತ್ತ ಬೆಳೆದೆ. ಮೆಣಸು ಮತ್ತಿತರ ಮಳೆಗಾಲದ ತರಕಾರಿ ಬೆಳೆಯುವ ಕ್ರಮವನ್ನೇ ಭತ್ತ ಬೆಳೆಯಲು ಅನುಸರಿಸಿದೆ. ಸುಮಾರು ೨೨ ಇಂಚುಗಳಷ್ಟು ದೂರಕ್ಕೆ ಇರುವಂತೆ ಏರಿ ಮಾಡುವುದು, ಸುಮಾರು ೯ ಇಂಚು ದೂರಕ್ಕೆ ಎರಡರಂತೆ ಬಲಿಷ್ಟ ಸಸಿ ನೆಟ್ಟು ನಿಗದಿತ ಕಾಲಾವಧಿಯಲ್ಲಿ ಗೊಬ್ಬರ ಕೊಡತೊಡಗಿದೆ. ಒಲೆಯಲ್ಲಿ ದೊರೆಯುತ್ತಿದ್ದ ಬೂದಿಯನ್ನೂ ಸಸಿಯ ಮೇಲೆ ಬೀಸಿ ಹಾಕುತ್ತಿದ್ದೆ. ಒಂದೆರಡು ಬಾರಿ ಹಗುರವಾಗಿ ಬುಡಕ್ಕೆ ಮಣ್ಣು ಹಾಕಿದರೆ ಬುಡ ಭದ್ರವಾಗುತ್ತದೆ. ಈ ರೀತಿಯಲ್ಲಿ ಭತ್ತ ಬೆಳೆಸುವಿಕೆ ನನಗೆ ಅಪಾರ ಯಶಸ್ಸನ್ನು ತಂದುಕೊಟ್ಟಿತು. ನನ್ನ ಅದುವರೆಗಿನ ಸೋಲನ್ನು ಮೆಟ್ಟಿನಿಂತ ಅನುಭವ ನನ್ನದಾಯಿತು. ಯಾವುದನ್ನು ಆಸು-ಪಾಸಿನವರು ಅಸಾಧ್ಯವೆಂದು ಬಗೆದಿದ್ದರೋ ಅದನ್ನು ನಾನು ಸಾಧಿಸಿದಂತಾಯಿತು. ಗಾಂಧೀಜಿ ಹೇಳಿದಂತೆ ನನ್ನ ಅನ್ನವನ್ನು ನಾನೇ ಬೆಳೆದುಕೊಂಡೆನಲ್ಲಾ ಎನ್ನುವ ಸಂತಸ ನನ್ನದಾಯಿತು. ನಾನು ಪರಿಪೂರ್ಣ ಸ್ವಾವಲಂಬೀ ಭಾರತೀಯನಾಗುತ್ತಿದ್ದ ಆತ್ಮತೃಪ್ತಿ ಮೂಡಿತು.

ನನ್ನ ಭತ್ತ ಬೆಳೆಯುವ ಪ್ರಯೋಗವನ್ನು ಅಲ್ಲಿಗೆ ನಿಲ್ಲಿಸಲಿಲ್ಲ. ಇತರ ಸಾಧ್ಯತೆಗಳತ್ತ ಪ್ರಯತ್ನ ನಡೆಸಿದೆ. ಹರಿವೆ ಗರದ ಹಾಗೆ ಪಾತಿ ಮಾಡಿ (ಬೆಡ್) ಗೊಬ್ಬರದ ಹುಡಿಕೊಟ್ಟು ನೆಟ್ಟರೆ ಬೇಸಾಯ ಚೆನ್ನಾಗಿ ಆಗಲಿಲ್ಲ. ಈಗ ನಾನು ಮಾಡುತ್ತಿರುವ ಏರಿ ಬೇಸಾಯ ಕ್ರಮಕ್ಕೆ ಸರ್ವೋದಯ ಬೇಸಾಯ ಕ್ರಮವೆಂದು ಕರೆದೆ. ಇದಕ್ಕೆ ಎತ್ತು, ಹೋರಿ, ನೇಗಿಲು, ಮೊದಲಾದ ಕೃಷಿ ಸಲಕರಣೆ-ಸಾಧನಗಳ ಅವಶ್ಯಕತೆ ಇಲ್ಲ. ಇದು ಮಾನವ ಶಕ್ತಿಯಿಂದಲೇ ಆಗುವ ಬೇಸಾಯ ಕ್ರಮ.

ಕರಿದಡಿ ತಳಿ ಬಹಳ ಸೊಕ್ಕಿಹೋಗಿ ಬಿದ್ದು ಹೋಯಿತು. ತೆನೆ ಜಳ್ಳಾಯಿತು. ಆದ್ದರಿಂದ ಕರಿದಡಿ ಈ ಕ್ರಮಕ್ಕೆ ಸೂಕ್ತವಲ್ಲ. ಏರಿ ಬೇಸಾಯ ಕ್ರಮದಲ್ಲಿ ಜಯ, ಫಲ್ಗುಣ ತಳಿಗಳು ಕೂಡಾ ಅತಿ ಮಳೆಯಿಂದಾಗಿ ಜಳ್ಳಾಗಿ ಹೋಯಿತು. ನನ್ನ ವಿಧಾನಕ್ಕೆ ಸಮರ್ಪಕವಾಗಿ ಹೊಂದಿಕೊಂಡಿದ್ದು ಕೊತ್ತುಮುರಿ ಭತ್ತ. ಮೇ ಒಂದರಂದು ೨ ಸೇರು ಕೊತ್ತುಮುರಿ ಭತ್ತದ ಬೀಜ ಗರಮಾಡಿ ಬಿತ್ತಿ ನೀರು ಕೊಡುತ್ತಾ ಇದ್ರೆ ಜೂನ್ ೧ರಿಂದ ೧೦ರ ಒಳಗೆ ಮಳೆ ಬಂದ ತಕ್ಷಣ ಗಟ್ಟಿಜಾಗ ಆದಲ್ಲಿ ಎರಡು ಸಾರಿ ಹೂಡಿ ೨೨ ಇಂಚು ಅಂತರದಲ್ಲಿ ಏರಿ ತೆಗೆದು ಬಿಳಿ ಬೂದಿ, ಗೊಬ್ಬರದ ಹುಡಿ ಬೆರೆಸಿ ಹಾಕಬೇಕು. ಆಗಾಗ ಹಿಂಡಿಯನ್ನು ಕೊಡುತ್ತಿರಬೇಕು. ಆರಂಭದಲ್ಲಿ ಯುರಿಯಾ, ಸುಫಲಾ ಮೊದಲಾದ ರಾಸಾಯನಿಕ ಬಳಸುತ್ತಿದ್ದೆ. ಸ್ವಾವಲಂಬನೆಯ ಸಿದ್ಧಾಂತಕ್ಕೆ ಅದು ಸರಿ ಹೊಂದುವಂತದಲ್ಲ ಎಂದು ಬಳಿಕ ಅದನ್ನು ತಿರಸ್ಕರಿಸಿದೆ. ಅದರಿಂದ ಅಪರೂಪಕ್ಕೆ ಒಳ್ಳೆಯದೆನಿಸಿತ್ತು. ಆದರೆ ತೊಂದರೆಗಳು ಅದಕ್ಕಿಂತ ಹೆಚ್ಚಿತ್ತು. ರಾಸಾಯನಿಕ ಹಾಕಿದಲ್ಲಿ ಮಣ್ಣಿನ ಶಕ್ತಿ ಕುಂಠಿತವಾಯಿತು, ರೋಗ ಹೆಚ್ಚಾಯಿತು.

ಆರಂಭದಲ್ಲಿ ನನ್ನಲ್ಲಿ ಕೃಷಿ ಮಾಹಿತಿ ಇಲ್ಲದಿದ್ದ ಕಾರಣ ಬಹಳ ಕಸಿವಿಸಿಗೊಳ್ಳುತ್ತಿದ್ದೆ. ಕ್ರಮೇಣ ನಾನೇ ಹತ್ತಿ ಬೆಳೆದು ನೂಲು ಮಾಡಿ ನನ್ನ ಬಟ್ಟೆಯನ್ನು ನಾನೇ ನೈದುಕೊಂಡಿದ್ದೇನೆ. ಇದಕ್ಕೆಲ್ಲಾ ಸ್ವಾವಲಂಬನೆಯ ಮನಸ್ಸು ಬೇಕು. ತರಕಾರಿ ಬೆಳೆ ನನಗೆ ಬಹಳ ಸಹಕಾರ ಕೊಡುತ್ತಿತ್ತು. ಇದು ಅತ್ಯಂತ ಸುಲಭದ ಕೃಷಿ ಕೆಲಸ ಮಾತ್ರವಲ್ಲದೇ ತಕ್ಷಣ ಫಲಕೊಡುತ್ತಿತ್ತು. ಹೆಚ್ಚೆಂದರೆ ೩ ತಿಂಗಳೊಳಗೆ ಉತ್ಪಾದನೆಯಾಗುತ್ತದೆ. ಶೀಘ್ರವಾಗಿಯೇ ಹಣ ಗಳಿಸಬಹುದು. ಉಡುಪಿ ಗುಳ್ಳ ಬದನೆ ಬಹಳ ಲಾಭದಾಯಕ. ಒಂದು ಸಣ್ಣ ಪ್ರಮಾಣದಲ್ಲಿ ಬೆಳೆದ ಬದನೆ ನಮ್ಮ ಮನೆ ಬಳಕೆ ಮೀರಿ ರೂಪಾಯಿ ೬೦೦

ಮಾರಾಟದಿಂದ ಬಂತು. ಹರಿವೆಬೀಜ ಹಾಕಿ ೩೦ ದಿನಗಳಲ್ಲಿ ಮಾರಾಟ ಮಾಡಿ ಲಾಭಗಳಿಸಬಹುದು.

## ತರಕಾರಿ ಬೆಳೆಸುವ ಕ್ರಮ

ನಮ್ಮ ಪರಿಸರದಲ್ಲಿ ಮೇ ಮೊದಲ ವಾರ ಕೃಷಿ ಚಟುವಟಿಕೆಗೆ ತೊಡಗುವ ಸೂಕ್ತ ಸಮಯ. ಈ ಸಂದರ್ಭದಲ್ಲಿ ಎಲ್ಲಾ ತರದ ತರಕಾರಿ ಬೀಜಗಳನ್ನು ಮೊಳಕೆ ಬರಿಸಬೇಕು. ಕಸ-ಮಸಗಳಿಗೆಲ್ಲಾ ಬೆಂಕಿ ಹಾಕಿ ಸುಟ್ಟು, ಮಣ್ಣು ಹದಗೊಳಿಸಬೇಕು. ಅಲಸಂಡೆ, ಗುಳ್ಳ ಬದನೆಕಾಯಿಗಳನ್ನು ಏಪ್ರಿಲ್ ತಿಂಗಳಲ್ಲಿ ಬೀಜ ಹಾಕಿ ಸಸಿ ಮಾಡಿಕೊಂಡರೆ ಮೇ ತಿಂಗಳಲ್ಲಿ ನೆಡಲು



ಸೂಕ್ತವಾಗಿರುತ್ತದೆ. ಸಸಿ ನೆಟ್ಟು ಬುಡಕ್ಕೆ ದರ್ಲೆ ಅಥವಾ ಒಣ ತರಗೆಲೆ ಗಳನ್ನು ಹಾಕಿ ಮುಚ್ಚಬಹುದು. ಒಂದು ವಾರದ ಮೇಲೆ ಸೆಗಣಿ ನೀರು ಸಿಂಪಡಿಸಬೇಕು. ಸಸಿ ಬೆಳೆದಂತೆ ಆಗಾಗ ಗೊಬ್ಬರ ಕೊಡುತ್ತಿರಬೇಕು. ಮಳೆ ಹೋದಮೇಲೆ ಇದೇ ರೀತಿ ಬುಡಕ್ಕೆ ಸಾರಕೊಡುತ್ತಾ ದಿನ ಬಿಟ್ಟು ಸ್ವಲ್ಪ ನೀರು ಕೊಡುತ್ತಿರಬೇಕು. ಹೀಗೆ ೬-೭ ತಿಂಗಳವರೆಗೂ ಫಸಲು ಕೊಡುತ್ತಿರುತ್ತದೆ.

ಸುಮಾರು ೧೦೦೦ ಸಸಿ ನೆಟ್ಟರೆ ತಲಾ ಗಿಡವೊಂದಕ್ಕೆ ೩ ರೂಪಾಯಿನಂತೆ ಸುಮಾರು ಮೂರು ಸಾವಿರ ರೂಪಾಯಿ ಸಂಪಾದನೆಯಾಗುತ್ತದೆ. ಗಿಡಗಳನ್ನು ಮಂದವಾಗಿ ನೆಡಬಾರದು. ಸಾಧಾರಣ ಎರಡೂವರೆ ಅಡಿ ಅಂತರದಲ್ಲಿರುವಂತೆ ನೆಡಬೇಕು. ಅಡ್ಡಕ್ಕೆ ಏರಿಯಿಂದ ಏರಿಗೆ ನಾಲ್ಕು ಅಡಿ ಅಂತರವಿರಬೇಕು.

ನಮ್ಮ ಪ್ರದೇಶದಲ್ಲಿ ೬-೭ ತಿಂಗಳು ಕಾಲದ ದೀರ್ಘ ಮಳೆಗಾಲ ಇರುವುದೇ ಕೃಷಿಕರ ಭಾಗ್ಯ. ಎಂತಹ ಗುಡ್ಡದ ಮೇಲೂ ಬಿತ್ತಿ ಬೆಳೆಯುವುದು ಸಾಧ್ಯ. ನೀರಿಗಾಗಿ ಕಷ್ಟಪಡಬೇಕಾಗಿಲ್ಲ. ಅದಕ್ಕಾಗಿ ದುಡ್ಡು ಖರ್ಚು ಮಾಡಿ ಶ್ರಮ ಪಡುವ ಅವಶ್ಯಕತೆಯೇ ಇಲ್ಲ. ಪ್ರಕೃತಿ ಮಾತೆ ತಾನಾಗಿಯೇ ಕೊಡುತ್ತಿರುವ ನೀರನ್ನು ಬಳಸುವುದನ್ನು ಕಲಿಯಬೇಕು. ಮಳೆಗಾಲದಲ್ಲಿ ಮೆಣಸು, ಶುಂಠಿ, ಅರಿಶಿಣ, ಬಳ್ಳಿಗೆಣಸು, ಮರಗೆಣಸು, ಸಾಂಬ್ರಾಣಿ, ಸುವರ್ಣಗೆಡ್ಡೆ ಮೊದಲಾದುವುಗಳನ್ನು ಸುಲಭವಾಗಿ ಬೆಳೆಸಬಹುದು. ಇವೆಲ್ಲಾ ಉತ್ತಮ ಆಹಾರಗಳಾಗಿವೆ. ಬಡವರಿಗೆ ಹೇಳಿ ಮಾಡಿಸಿದ ಬೆಳೆಗಳು. ಇವೆಲ್ಲವನ್ನೂ ನಾನು ನಿರಂತರ ಬೆಳೆಸುತ್ತಾ ಬಂದಿರುವುದರಿಂದ ನನ್ನ ಬಡತನ ನಿಧಾನವಾಗಿ ದೂರವಾಗುತ್ತ ಬಂತು.

ನನ್ನ ತಕ್ಷಣದ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಅಲ್ಪಕಾಲಿಕ ಬೆಳೆಗಳಿಗೆ ನನ್ನನ್ನು ಒಪ್ಪಿಸಿಕೊಂಡೆ. ಅವು ನನ್ನ ಕೈಬಿಡಲಿಲ್ಲ. ಇದರ ಜೊತೆಗೇ ಕೆಲವು ದೀರ್ಘಕಾಲಿಕ ಬೆಳೆಗಳನ್ನೂ ಬೆಳೆಯತೊಡಗಿದೆ. ಒಟ್ಟು ಭೂಮಿಗೆ ಸರಿಹೊಂದುವ ಅಂತರದಲ್ಲಿ ಮಾವು, ಹಲಸು, ಬೂರುಗ, ಗೇರು ಬೆಳೆಸತೊಡಗಿದೆ. ಬೆಳೆದು ದೊಡ್ಡದಾಗುತ್ತಿದ್ದ ಮರಕ್ಕೆ ಕರಿಮುಂಡ, ಪಣಿಯೂರು ಮೊದಲಾದ ಕಾಳುಮೆಣಸಿನ ತಳಿಗಳನ್ನು ನೆಡತೊಡಗಿದೆ. ನನಗೆ ವಯಸ್ಸಾಗುತ್ತಿದ್ದಂತೆ ಶ್ರಮದ ಉಳಿತಾಯ ಮಾಡಬೇಕಾಗಿತ್ತು. ಕಠಿಣ ಕೆಲಸ ನನ್ನ ಆರೋಗ್ಯ ಹಾಳು ಮಾಡುತ್ತಿದ್ದ ಕಾರಣ ಈ ಬೆಳೆಗಳು ನನಗೆ ಅನುಕೂಲಕರವೆನಿಸಿದವು.

ಇದಲ್ಲದೇ ತಮ್ಮಷ್ಟಕ್ಕೆ ಬೆಳೆದು ನಿಂತ ಕಾಡು ಮರಗಳಿಗೂ ಕಾಳು ಮೆಣಸಿನ ಬಳ್ಳಿ ಹಬ್ಬಿಸಿದ್ದೇನೆ. ಒಣ ತರಗೆಲೆ, ಕಿತ್ತ ಕಳೆ ಮೊದಲಾದುವುಗಳನ್ನು ಅವುಗಳ ಬುಡಕ್ಕಿಷ್ಟು ಹಾಕಿದರೆ ಅದೇ ಗೊಬ್ಬರ. ಯಾವ ರೋಗವೂ ಅವುಗಳನ್ನು ಹಾಳುಮಾಡಲಿಲ್ಲ. ವರ್ಷ ವರ್ಷವೂ ತಪ್ಪದೇ ಫಲಕೊಡುತ್ತಿದ್ದವು. ಅವುಗಳಿಗೆ ಮೋಸ ಮಾಡುವುದು ಗೊತ್ತಿಲ್ಲ.

ಆದರೆ ಅವು ಮಾನವನಿಂದಾಗಿ ಮೋಸಹೋಗುವುದುಂಟು. ಹಗಲು-ರಾತ್ರಿ, ಹುಣ್ಣಿಮೆ-ಅಮವಾಸ್ಯೆ, ಋತುಮಾನಗಳನ್ನು ಮನುಷ್ಯರಿಗಿಂತ ನಿಖರವಾಗಿ ಗಿಡ-ಮರಗಳು ತಿಳಿದುಕೊಳ್ಳುತ್ತವೆ. ಪ್ರಕೃತಿಗೆ ಜೀವ ಇದೆ ಎಂದು ನಮಗೆ ಗೊತ್ತಾಗುವುದೇ ಇಲ್ಲ.



ನನ್ನ ಬದುಕಿನ ಕಷ್ಟಗಳನ್ನು ಅರ್ಥಮಾಡಿಕೊಂಡ ಇನ್ನೊಂದು ಜೀವವೆಂದರೆ ಬಾಳೆ. ಆರಂಭದ ದಿನಗಳಿಂದಲೂ ಬಾಳೆ ನಮ್ಮ ಜೊತೆಗೇನೇ ಬಂದಿದೆ. ಅವುಗಳಿಗೆ ಕನಿಕರ ಜಾಸ್ತಿ. ತನ್ನ ಒಬ್ಬನಿಂದ ಸಾಕುವುದು ಕಷ್ಟ ಎಂದು ಕಂಡಾಗ ತನ್ನ ಬುಡದಲ್ಲಿ ಅನೇಕ ಬಿಳ್ಳ ಬರಿಸಿ ನನಗೆ ಧೈರ್ಯ ಕೊಡುತ್ತಾ ಬಂದಿವೆ. ಒಂದು ಗೊನೆ ಹಾಕಿ ತನ್ನ ಬದುಕು ಮುಗಿಸುವ ಹೊತ್ತಿಗೆ ನಾಲ್ಕಾರು ಮರಿಗಳು ಗೊನೆ ಹಾಕಲು ಸಿದ್ಧವಾಗಿ ನಿಂತಿರುತ್ತವೆ. ಆರ್ಥಿಕವಾಗಿ ಮನುಷ್ಯನಿಗೆ ಬಾಳೆ ಅತ್ಯಂತ ಲಾಭದಾಯಕ ಬೆಳೆ.

ದೀರ್ಘಾವಧಿ ಬೆಳೆಗಳಲ್ಲಿ ತೆಂಗು ಪ್ರಧಾನವಾದದ್ದು. ಬೇಸಿಗೆಯಲ್ಲಿ ಸ್ವಲ್ಪ ಮಟ್ಟಿನ ನೀರಾಶ್ರಯ ಬೇಕೇ ಬೇಕು. ದಿನ ಖರ್ಚಿನ ಬೆಳೆ ಬೆಳೆಯುತ್ತಿದ್ದಂತೆಯೇ ದೂರದೂರಕ್ಕೆ ತೆಂಗಿನ ಸಸಿ ಹಾಕತೊಡಗಿದೆ. ಕಾಲಕಾಲಕ್ಕೆ ನೀರು, ಗೊಬ್ಬರ ಹಾಕುತ್ತಾ ಬಂದೆ. ಭತ್ತ, ತರಕಾರಿಗಳಿಗೆ ಕೊಡುತ್ತಿದ್ದ ಗೊಬ್ಬರವನ್ನು ಇವು ಸ್ವೀಕರಿಸುತ್ತಿದ್ದುವು. ವರ್ಷ ಕಳೆದಂತೆ

ದಷ್ಟಪುಷ್ಟವಾಗತೊಡಗಿದ ಇವುಗಳು ನನ್ನ ಭವಿಷ್ಯದ ರಕ್ಷಣೆಗೆ ಅಣಿಯಾಗುವ ಸಿಪಾಯಿಗಳಂತೆ ತೋರುತ್ತಿದ್ದುವು. ಐದಾರು ವರ್ಷಗಳಲ್ಲಿ ಕೊಂಬು ಹೊಡೆದು ನಿಂತುವು.ಅದುವರೆಗೆ ತೆಂಗಿನಕಾಯಿಗಾಗಿ ಕಷ್ಟಪಡುತ್ತಿದ್ದ ನಮಗೆ ಎದುರಾದ ಆನಂದಕ್ಕೆ ಸೀಮೆ ಇಲ್ಲದಾಯಿತು. ಮನೆ ಖರ್ಚು, ಅಗತ್ಯದ ತೆಂಗಿನೆಣ್ಣೆ, ಎಲ್ಲವೂ ಆಗಿ ಮಿಕ್ಕಿದವುಗಳನ್ನು ಮಾರಾಟ ಮಾಡತೊಡಗಿದೆ. ಉಳಿಕೆಯ ಹಣ ದೊಡ್ಡದಾಗುತ್ತಾ ಹೋಗತೊಡಗಿತು. ಜೊತೆಗೆ ಮಡಲು, ತಟ್ಟಿ, ಹೆಡೆ, ಕತ್ತ, ಉರುವಲು ಎಲ್ಲವೂ ಉಳಿಕೆಯಾಗ ತೊಡಗಿತು. ಮರ ಉದ್ದವಾಗುತ್ತಿದ್ದಂತೆಯೇ ಕಾಳುಮೆಣಸಿನ ಬಳ್ಳಿಯನ್ನು ಬುಡದಲ್ಲಿ ನೆಟ್ಟು ಒಂಟಿಯಾಗಿದ್ದ ಅವುಗಳಿಗೆ ಜೊತೆ ಮಾಡಿಬಿಟ್ಟೆ. ಎರಡೂ ಒಟ್ಟಾಗಿ ನನಗೆ ಸಹಾಯಮಾಡಿದವು.

## ಪ್ರಕೃತಿಯೇ ದೇವರು

ನನ್ನ ಕೃಷಿ ಬದುಕಿನಲ್ಲಿ ಎಷ್ಟೋ ತಪ್ಪುಗಳನ್ನು ಮಾಡಿದ್ದೇನೆ. ತಪ್ಪು ಮಾಡುತ್ತಾ ನನ್ನನ್ನು ತಿದ್ದಿಕೊಂಡು ಸರಿದಾರಿಗೆ ಬರಲು ಪ್ರಯತ್ನಿಸಿದ್ದೇನೆ. ಇಂದು ನನ್ನ ಕಣ್ಣು ಮುಂದೆ ಇರುವ ಹಸುಕರುಗಳು, ಗಿಡ, ಮರ ಬಳ್ಳಿಗಳು ನನ್ನೊಂದಿಗೇ ಬೆಳೆದು ಬಂದಿವೆ. ಮುಂಜಾವಿನಲ್ಲೆದ್ದು ನನ್ನ ತೋಟದ ತುಂಬ ಕಣ್ಣು ಹಾಯಿಸಿದಾಗ ಹಸಿರು ಹೊತ್ತ ಚಿಗುರೆಲೆಗಳು ಮನಸ್ಸಿಗೆ ಸಿಹಿ ಕೊಡುತ್ತಿರುತ್ತವೆ. ಮರತುಂಬಿದ ಹಣ್ಣುಗಳು ಅಮೃತ ಸಮಾನವಾದ ಹಸುವಿನ ಹಾಲು ಸವಿಯುತ್ತಿದ್ದಾಗ ಈ ಪ್ರಕೃತಿ ಪರಮಾತ್ಮನ ಮೇಲೆ ತುಂಬು ಭಕ್ತಿಯಿಂದ ಪುಳಕಿತನಾಗುತ್ತೇನೆ. ಭಕ್ತಿಭಾವದ ನಡುವೆ ತುಂಬಿದ ತೋಟ ದೊಳಗೆ ನಿಂತಾಗ ಎಷ್ಟೋ ಬಾರಿ ನನ್ನ ಕಣ್ಣಿಂದ ನೀರು ಹನಿದಿತ್ತು. ಯಾಕೆಂದರೆ ಒಂದು ಕಾಲದಲ್ಲಿ ಇಲ್ಲಿಗೆ ಅನಾಥನಂತೆ ಮಕ್ಕಳು ಮರಿಗಳೊಂದಿಗೆ ಬಂದವನಿಗೆ ಬದುಕು ಸಾಗಿಸುವುದೇ ದುಸ್ತರವಾಗಿತ್ತು. ಬಡತನದಲ್ಲಿ ಬಸವಳಿದಿದ್ದೆ. ನನ್ನ ಮಕ್ಕಳನ್ನು ಉಪವಾಸ ಕೆಡವಿದ್ದೇನೆ. ಆದರೆ ನಾನು ಯಾವ ದೇವಸ್ಥಾನಕ್ಕೂ ಹೋಗಿ ಕೈಮುಗಿದು ಬೇಡಲಿಲ್ಲ. ದೇವರು ಇಲ್ಲಿಯೇ ನನ್ನ ಬಳಿಯಲ್ಲಿದ್ದ. ನಾನು ಪರಿಶ್ರಮ ಪಡುತ್ತಿದ್ದೆ. ದೇವರು ಅನೇಕ ಸೊತ್ತುಗಳನ್ನು ಕೊಡತೊಡಗಿದ. ಹೆಂಡತಿ-ಮಕ್ಕಳನ್ನು ಕಟ್ಟಿಕೊಂಡು ತಾಯಿ ಕೋಳಿಯ ಹಾಗೆ ನೆಲವನ್ನು ಕೆದಕುತ್ತಿದ್ದೆ. ಈಗ ಈ ತೋಟದ ಯಾವ ಮೂಲೆಯಲ್ಲಿ ಹೋಗಿ ಕೆದಕಿದರೂ ಒಂದಲ್ಲ ಒಂದು ಸೊತ್ತು ಸಂಪತ್ತು ಕೈಗೆ ಸಿಗುತ್ತದೆ. ನನ್ನ ಮಡದಿ ಮಕ್ಕಳು ಕೂಡಾ ಮನಸ್ಸು

ಹೃದಯ ತುಂಬಿಕೊಂಡು ದೇವರು ಕೊಟ್ಟದ್ದು ಸಾಕು. ಇನ್ನಷ್ಟು ದೇವರ ಸೇವೆ ಮಾಡುವ ಅಂತ ನನ್ನ ಜೊತೆ ಸೇರಿ ಖುಷಿಯಿಂದ ದುಡಿಯುತ್ತಾರೆ.

ಹೀಗೆ ಪ್ರತಿಯೊಂದು ಮನೆಯಲ್ಲೂ ಒಟ್ಟಾಗಿ ದುಡಿಯುವುದಿದ್ದರೆ ಸಮಾಜದಲ್ಲಿ ಸಮೃದ್ಧಿಯಾಗುತ್ತದೆ. ದೇಶದಲ್ಲಿ ಶಾಂತಿ ನೆಲೆಸುತ್ತದೆ. ಕುಟುಂಬದ ಮಂದಿ ಮಕ್ಕಳು-ದೊಡ್ಡವರು, ಗಂಡು-ಹೆಣ್ಣು ಎಲ್ಲರೂ ಅವರವರ ಪಾಡಿಗೆ ಶ್ರಮ ಪಡಬೇಕು. ತಮ್ಮದೇ ಕೆಲಸವನ್ನು ಆಯ್ದುಕೊಂಡು ಪರಸ್ಪರ ಸಹಕಾರಿಗಳಾಗಿರಬೇಕು. ಮನೆಯ ಒಳಗಿನ ಮತ್ತು ಹೊರಗಿನ ಕೆಲಸಗಳು ಜೊತೆ ಜೊತೆ ಸಾಗುತ್ತಿರಬೇಕು. ಆಗಲೇ ನೆಮ್ಮದಿ ನೆಲೆಸುವುದು. ಮನಸ್ಸಿನಲ್ಲಿ ನೆಮ್ಮದಿ ಇದ್ದರೆ ಮನೆಯಲ್ಲೂ, ಮನೆಯಲ್ಲಿ ನೆಮ್ಮದಿ ಇದ್ದರೆ ಊರಿನಲ್ಲೂ ನೆಮ್ಮದಿ ಶಾಂತಿ ಇರುವುದು. ದುಡಿಮೆ ಮಾಡುವವರಿಗೆ ಜಗಳಕ್ಕೆ ಬಿಡುವು ಸಿಗುವುದಿಲ್ಲ.

ಈಗಿರುವ ಸಾಮಾಜಿಕ-ಆರ್ಥಿಕ ಅಸಮಾನತೆ ಹೋಗದೇ ಶಾಂತಿ ಹುಟ್ಟಲಾರದು. ಸಂಘರ್ಷದಿಂದ ಸಮಾನತೆ ತರಲು ಸಾಧ್ಯವಿಲ್ಲ. ಉಳ್ಳವರೇ ಮುಂದೆ ಬಂದು ಇಲ್ಲದವರ ಸಹಾಯಕ್ಕೆ ನಿಲ್ಲಬೇಕು. ಅದೇ ರಾಮರಾಜ್ಯ. ಬಡವರ ಏಳಿಗೆಗಾಗಿ ಶ್ರೀಮಂತರು ಪ್ರಯತ್ನ ನಡೆಸಬೇಕು. ಕನಿಷ್ಠ ಸಹಕಾರವನ್ನಾದರು ನೀಡಬೇಕು. ಹೆಚ್ಚು ಭೂಮಿ ಉಳ್ಳವರು ಇಲ್ಲದವರಿಗೆ ನೀಡಬೇಕು. ಸಮಾಜದ ಗಣ್ಯರು, ಸರಕಾರೇತರ ಕಾನೂನು ರೀತಿಯಲ್ಲಿ ಭೂರಹಿತರಿಗೆ ಭೂಮಿ ಒದಗಿಸಬೇಕು. ನೀರಿಲ್ಲದವರಿಗೆ ನೀರು ಕೊಡಿಸಬೇಕು. ನಿಸರ್ಗದ ಶಕ್ತಿ ಅಪಾರ. ಅದರ ಸಾಮರ್ಥ್ಯವನ್ನು ಅಳೆಯಲು ಸಾಧ್ಯವಿಲ್ಲ. ಒಂದು ಬೀಜದಿಂದ ಅಸಂಖ್ಯಾತ ಬೀಜಗಳು, ಅಸಂಖ್ಯಾತ ಬೀಜಗಳಿಂದ ಅಸಂಖ್ಯಾತ ಮರಗಳಾಗುತ್ತವೆ. ನಾನು ಈ ತುಂಡು ಭೂಮಿಗೆ ಬಂದಾಗ ಒಂದೇ ಒಂದು ಮಾವು ಹಲಸು ಬೆಳೆಯುತ್ತಿದ್ದಿರಲಿಲ್ಲ. ಉಪವಾಸ ಬೀಳುತ್ತಿದ್ದ ಆ ದಿನಗಳಲ್ಲಿ ಯಾರಾದರೂ ಒಂದು ಸೇಡೆ ಹಲಸಿನ ಹಣ್ಣು ಕೊಟ್ಟರೆ ಅದೇ ಔತಣವಾಗುತ್ತಿತ್ತು. ಹೀಗಿದ್ದ ಒಂದು ದಿನ ನಾನು ನೆರೆಮನೆಗೆ ಹೋದಾಗ ಮನೆಯವರೆಲ್ಲಾ ಕುಳಿತು ಹಲಸಿನ ಹಣ್ಣು ತಿನ್ನುತ್ತಿದ್ದರು. ನಾನಾದರೋ ಅರೆಹೊಟ್ಟೆಯಲ್ಲಿರುವವ, ಮನೆಗೆ ಬಂದ ನನಗೂ ಒಂದು ಸೇಡೆ ಹಣ್ಣು ಇತ್ತರು. ನನಗದನ್ನು ಅಲ್ಲೇ ತಿನ್ನಲು ಮನಸ್ಸು ಕೇಳಲಿಲ್ಲ. ಮನೆಯಲ್ಲಿರುವ ಮಕ್ಕಳ ನೆನಪಾಗಿ ಹಾಗೇ ಹಿಡಿದುಕೊಂಡು ಬಂದೆ. ಇಂತದ್ದೇ ಮರ ನಮ್ಮ ಹಿತ್ತಲಲ್ಲೂ ಇರುತ್ತಿದ್ದರೆ ಎಂಬ ಯೋಚನೆ ಬಂತು.



ಆದರೇನು ಒಂದೆರಡು ವರ್ಷದೊಳಗೂ ಆಗುವಂತದಲ್ಲ. ಆದರೆ ಆಸೆ ಬಿಡಲಿಲ್ಲ. ಅಂಗೈಯಲ್ಲಿ ಹಿಡಿದಿದ್ದ ಹಲಸಿನ ಬೀಜಗಳನ್ನು ನೋಡಿ ಇದು ಪರಮಾತ್ಮನೇ ನಮಗಾಗಿ ಕಳುಹಿಸಿ ಕೊಟ್ಟಿದ್ದಾನೆ ಎಂದು ಭಾವಿಸಿ ಮನೆಯ ಎದುರಿನ ನೆಲದಲ್ಲಿ ನೆಟ್ಟುಬಿಟ್ಟೆ. ಆಮೇಲೆ ನನ್ನ ಯಾವುದೇ ಪರಿಶ್ರಮ ಇಲ್ಲದೇ ಮೊಳಕೆಯೊಡೆದು ಬಹುಬೇಗನೇ ಬೆಳೆಯತೊಡಗಿತು. ಒಂದೇ ವರ್ಷದಲ್ಲಿ ನನಗಿಂತಲೂ ಎತ್ತರವಾಯಿತು. ನಾವು ನೋಡುತ್ತಿದ್ದಂತೆಯೇ ಮರವಾಯಿತು. ತನ್ನ ಎಂಟನೇ ವರ್ಷದಲ್ಲಿ ತನ್ನ ಮೈತುಂಬಾ ಕಡಿಗೆ ಹೊರಡಿಸಿಕೊಂಡಿತು. ಎಂಟು ವರ್ಷಗಳ ಹಿಂದೆ ನಾನು ನೆರೆಮನೆಯವರಿಂದ ಪಡೆದ ನೂರಾರು ಸೇಡೆಗಳು ಆ ಮರದಲ್ಲಿ ನೇತಾಡುತ್ತಿರುವುದನ್ನು ಕಂಡೆ. ನನ್ನ ಸಂತಸಕ್ಕೆ ಗಡಿ ಇಲ್ಲದಾಯಿತು. ಇದುವರೆಗೆ

ಸಾವಿರಾರು ಹಲಸಿನ ಹಣ್ಣುಗಳನ್ನು ನಮಗಿತ್ತ ಆ ಮರ ದೇವರಿಗೆ ಸಮಾನಾಗಿದೆ. ಇವೆಲ್ಲಾ ಪ್ರಕೃತಿಯಲ್ಲಿ ತನ್ನಿಂತಾನಾಗಿ ಬೆಳೆಯುತ್ತವೆ. ಮನುಷ್ಯ ಪ್ರಕೃತಿಯನ್ನು ಅರ್ಥಮಾಡಿಕೊಳ್ಳಬೇಕು. ಮನುಷ್ಯ ತನ್ನ ಜೀವನದ ಭಾರವನ್ನು ಅನಾವಶ್ಯಕವಾಗಿ ಹೊತ್ತುಕೊಳ್ಳುವ ಅಗತ್ಯವಿಲ್ಲ.

ಒಬ್ಬ ಪ್ರಯಾಣಿಕ ರೈಲಿನೊಳಗೆ ಕುಳಿತು ತನ್ನ ಮೂಟೆಯನ್ನು ತಲೆಯ ಮೇಲೆ ಹೊತ್ತುಕೊಂಡಿದ್ದ. ತಾನೇ ಹೊರುವ ಕಾರಣ ರೈಲಿಗೆ ತ್ರಾಸವಾಗಬಾರದೆಂಬ ಯೋಚನೆ ಅವನದಾಗಿತ್ತು. ಆಗ ಆತನ ಪಕ್ಕದಲ್ಲಿ ಕುಳಿತಿದ್ದ ಹಿರಿಯರೊಬ್ಬರು, "ಅಯ್ಯ ಮಹಾನುಭಾವ ನೀನು ರೈಲು ಹತ್ತಿದ ಮೇಲೆ ನಿನ್ನ ಬ್ಯಾಗನ್ನು ಹೊರುವ ಹೊಣೆ ಬೇಡ ಅದನ್ನು ಕೆಳಗಿಟ್ಟು ನಿಶ್ಚಿಂತೆಯಿಂದಿರು. ರೈಲು ನಿನ್ನ ಜೊತೆಗೆ ಬ್ಯಾಗನ್ನೂ ಹೊತ್ತು ಸಾಗಿಸುತ್ತದೆ" ಎಂದರು. ಹೀಗೆ ಪ್ರತಿಯೊಬ್ಬ ಮನುಷ್ಯನೂ ಭೂಮಿ ಎನ್ನುವ ರೈಲಿನಲ್ಲಿ ತನ್ನ ಹೆಗಲ ಮೇಲಿನ ಹೊರೆಯನ್ನು ಇಳಿಸಿಬಿಡಬೇಕು ಮತ್ತು ನಿಶ್ಚಿಂತೆ ಯಿಂದಿರಬೇಕು.

ಭೂಮಿಗೆ ಸ್ವಯಂ ಉತ್ಪಾದನೆಯ ಸಾಮರ್ಥ್ಯವಿದೆ. ಭೂಮಿಯ ಚಲನಶೀಲತೆಯನ್ನು ಅರಿತುಕೊಂಡರೆ ಮಾತ್ರ ವ್ಯವಸಾಯ ಯಶಸ್ವಿ ಯಾಗುತ್ತದೆ. ನೆಲ, ನೀರು, ಬಿಸಿಲು-ಮಳೆ ಹವಾಗುಣಗಳ ಬದಲಾವಣೆಯ ಲಯವನ್ನು ಗುರುತಿಸಿಕೊಳ್ಳಬೇಕು. ಈ ಸಹಜ ಪರಿವರ್ತನೆಯ ಜೊತೆ ಕೃಷಿ ಚಟುವಟಿಕೆಗಳನ್ನು ಹೊಂದಿಸಿಕೊಳ್ಳುವುದೇ ಸಾರ್ಥಕ ಕೃಷಿ. ಬಡವರು, ಕನಿಷ್ಠರು, ಹಿಂದುಳಿದವರು ಬಹು ಜಾಗ್ರತೆಯಿಂದ ಭೂಮಿತಾಯಿಯ ಜೊತೆ ವ್ಯವಹರಿಸಬೇಕು. ನೈಸರ್ಗಿಕ ಮರ ಮಟ್ಟುಗಳಿಂದ ತೊಡಗಿ ತರಕಾರಿ, ಗೆಡ್ಡೆಗೆಣಸು, ಬಳ್ಳಿ, ಬಾಳೆ, ತೆಂಗು, ಗೇರು ಮೊದಲಾದುವುಗಳನ್ನು ಒಟ್ಟಾಗಿ ಬೆಳೆಸಬೇಕು. ಹೀಗೇ ವರ್ಷ ವರ್ಷವೂ ಕೂಡಾ ನಮ್ಮ ಸಂತಾನ ಪರ್ಯಂತ ಫಲಕೊಡುತ್ತವೆ.

ನಾವು ಭೂಮಿಯ ಭಾರವನ್ನು ಹೊರಬೇಕಾಗಿಲ್ಲ. ಬದಲಿಗೆ ಭೂಮಿಯೇ ನಮ್ಮನ್ನು ಹೊತ್ತುಕೊಂಡಿದೆ. ನಾವು ಗಿಡ ಮರಗಳಂತೆ ಇಂದು ಹುಟ್ಟಿ ನಾಳೆ ಸಾಯುವವರು. ನಾವು ಭೂಮಿಯ ಒಂದು ಭಾಗ ಅಷ್ಟೆ. ಭೂಮಿ ಇರುವುದು ನಮ್ಮನ್ನು ಸಲಹುವುದಕ್ಕೆ. ನಾವದನ್ನು ಜೀವಂತ ವಾಗಿರಲು ಸಹಕರಿಸಬೇಕು. ನಾವು ಸದಾ ಕೆಲಸ ಮಾಡುತ್ತಿರಬೇಕು. ಇದರಿಂದಾಗಿ ಭೂಮಿ ಅಭಿವೃದ್ಧಿಗೊಳ್ಳಬೇಕು. ನಾವು ಭೂಮಿಯನ್ನು

ಆಳುವವರಲ್ಲ. ಬದಲಿಗೆ ಭೂಮಿ ನಮ್ಮನ್ನು ಆಳುತ್ತದೆ. ನಾವ್ಯಾರೂ ಭೂಮಿ ಇದ್ದಷ್ಟು ಕಾಲ ಬದುಕುವವರಲ್ಲ. ಇಂತಹ ನಂಬಿಕೆಗಳು ನಮ್ಮಲ್ಲಿರಬೇಕು. ಇದರಿಂದಾಗಿ ಉತ್ತಮ ಕೃಷಿಕರಾಗುವುದು ಸಾಧ್ಯ. ನಾನಿದನ್ನೇ ನನ್ನ ಬದುಕಿನುದ್ದಕ್ಕೂ ಪಾಲಿಸುತ್ತಾ ಬಂದಿದ್ದೇನೆ.

## ನಾನು ವಿಮೆ ಮಾಡಿದ ವಿಧಾನ

ನಾನು ಮದುವೆಯಾದ ಆರಂಭದಲ್ಲಿ ಇನ್ಶೂರೆನ್ಸ್ ಏಜಂಟರೊಬ್ಬರು ನನ್ನಲ್ಲಿಗೆ ಬಂದರು. ನಿಮ್ಮ ಹೆಂಡತಿ ಮಕ್ಕಳ ಜೀವನ ಭದ್ರತೆಗಾಗಿ ಒಂದು ಪಾಲಿಸಿ ಮಾಡೋಣವೇ ಎಂದರು. ಸದಾ ಅಭದ್ರತೆಯಲ್ಲಿ ಬೆಳೆದು ಬಂದ ನನಗೆ ಸರಿ ಎನಿಸಿ ಅದಕ್ಕೆ ಒಪ್ಪಿದೆ. ವರ್ಷವೂ ಮೂವತ್ತಾರೂ ರೂಪಾಯಿ ಪ್ರೀಮಿಯಂ ಕಟ್ಟುತ್ತಾ ಹೋದರೆ ೩೦ ವರ್ಷ ಅಂದರೆ ನನ್ನ ೫೫ ನೇ ವರ್ಷದಲ್ಲಿ ಒಂದು ಸಾವಿರ ರೂಪಾಯಿ ದೊರೆಯುತ್ತದೆ ಎಂದರು. ಅದೇ ರೀತಿ ಕಟ್ಟುತ್ತಾ ಬಂದೆ. ನನ್ನ ಆರ್ಥಿಕ ಸಮಸ್ಯೆ ಜಟಿಲವಾಗುತ್ತಿದ್ದ ಕಾರಣ ಕೆಲವು ವರ್ಷಗಳ ಬಳಿಕ ಕಂತು ಕಟ್ಟಲಾಗಲಿಲ್ಲ. ನಾನೇ ತಪ್ಪಿದ ಮೇಲೆ ಎಲ್ಲವೂ ನಿರರ್ಥಕವಾಯಿತೆಂದು ಬಗೆದೆ. ಆದರೆ ನಾನು ಬೇರೊಂದು ದಾರಿ ಹುಡುಕಿಕೊಂಡೆ. ನಮ್ಮ ಹಿತ್ತಲಲ್ಲಿ ಖಾಲಿ ಬಿದ್ದಿದ್ದ ಜಾಗವನ್ನು ಆಯ್ದು ಎಂಟು ಕಸಿ ಮಾವಿನ ಗಿಡಗಳನ್ನು ನೆಟ್ಟೆ. ಅವುಗಳನ್ನು ಒಳ್ಳೆಯ ರೀತಿಯಲ್ಲಿ ಸಾಕಿದೆ. ಕೇವಲ ಏಳು ವರ್ಷಗಳಲ್ಲಿ ವಿಶಾಲವಾಗಿ ಬೆಳೆದುಕೊಂಡು ಮರದ ತುಂಬಾ ಫಲ ಕಾಣಿಸಿತು. ಅದೇ ವರ್ಷ ಮಾವಿನ ಫಸಲನ್ನು ನಾಲ್ಕು ಸಾವಿರ ರೂಪಾಯಿಗಳಿಗೆ ಬಿಟ್ಟುಕೊಟ್ಟೆ. ಆಮೇಲೆ ಪ್ರತಿ ವರ್ಷವೂ ಸಾವಿರಾರು ರೂಪಾಯಿಗಳ ಇಳುವರಿ ಪಡೆಯುತ್ತಾ ಬಂದೆ. ಇದೇ ನನ್ನ ಜೀವವಿಮೆ ಅಂದುಕೊಂಡೆ. ಆದರೆ ೩೦ ವರ್ಷಗಳ ಬಳಿಕ ಒಂದು ಸಾವಿರವಲ್ಲ, ಬದಲಿಗೆ ಪ್ರತಿ ವರ್ಷವೂ ಸಾವಿರಾರು ರೂಪಾಯಿಗಳು ದೊರೆಯುತ್ತವೆ.

## ನನ್ನ ಜೀವನ ಕೋಳಿಯ ತರಹ

ಬಹುತೇಕ ಜನರ ಜೀವನ ಹಕ್ಕಿಯ ತರ ಇದೆ. ಮೊಟ್ಟೆಯೊಡೆದು ಮರಿಯಾದೊಡನೆ ತಾಯಿ ಹಕ್ಕಿ ಅಲ್ಲಿ ಇಲ್ಲಿ ಹಾರಾಡಿ ಆಹಾರ ತಂದು ಮರಿಗಳ ಬಾಯಿಗೆ ತುರುಕುತ್ತದೆ. ಅವುಗಳೂ ದೇಹಕ್ಕಿಂತ ದೊಡ್ಡ ಬಾಯಿಬಿಟ್ಟು ಕಾದು ಕೂತಿರುತ್ತವೆ. ಆದರೆ ಕೋಳಿ ಹಾಗಲ್ಲ. ಮೊಟ್ಟೆಯೊಳಗಿಂದ ಮರಿಯನ್ನು ಹೊರಕ್ಕೆ ಎಳೆದು ತನ್ನೊಂದಿಗೆ ಕರೆದುಕೊಂಡು ಹೋಗುತ್ತದೆ.

ತನ್ನ ಕಾಲುಗಳಿಂದ ನೆಲ ಒಕ್ಕಲು ಆರಂಭಿಸುತ್ತದೆ. ಕೆರೆದು ಹಾಕಿದ ಜಾಗದಿಂದ ಮರಿಕೋಳಿಗಳು ಆಹಾರ ಹೆಕ್ಕಿ ತಿನ್ನುತ್ತವೆ. ಪ್ರಕೃತಿಯ ಮಡಿಲಲ್ಲಿ ಸುತ್ತಾಡಿ ಕಸ-ಮಸ ಕೆದಕಿ ಹುಳು ಹುಪ್ಪಟೆಗಳನ್ನು ತೋರಿಸುತ್ತಾ ತಾಯಿಕೋಳಿ ಸಾಗುತ್ತಿರುತ್ತದೆ. ತನ್ನ ಇಷ್ಟೇ ಶ್ರಮದಿಂದ ಮರಿಗಳನ್ನು ಸ್ವತಂತ್ರವಾಗಿ ದೊಡ್ಡದು ಮಾಡುತ್ತದೆ. ನಾವು ಈ ಕೋಳಿ ಸಂಸಾರದ ಮಾದರಿಯಲ್ಲಿ ಕಲಿಯುವ ವಿಚಾರವಿದೆ.

ಆಧುನಿಕ ಸಮಾಜದಲ್ಲಿ ನೌಕರಿ ಆಧಾರಿತ ದಿನಚರಿ. ಕುಟುಂಬದ ಯಜಮಾನ ಯಾವುದೋ ಕಛೇರಿ, ಕಾರ್ಖಾನೆಯಲ್ಲಿ ದುಡಿದು ತರಬೇಕು. ಹೆಂಡತಿ ಮಕ್ಕಳು ಆತನನ್ನೇ ಅವಲಂಬಿಸಿರುತ್ತಾರೆ. ಅವರು ಪರಾವಲಂಬಿಗಳಾಗಿಯೇ ಬೆಳೆಯುತ್ತಾರೆ. ಇದು ಬಹಳ ಕಷ್ಟದ ಸಂಗತಿ.

## ಸುಲಭದಲ್ಲಿ ಮಾಡಬಹುದಾದ್ದು ಮತ್ತು ಎಲ್ಲರೂ ಮಾಡಬಹುದಾದದ್ದು ಸರ್ವೋದಯ ಕೃಷಿ :

ಬಡವನಲ್ಲಿ ಬಂಡವಾಳ ಸುರಿಯುವ ಸಾಮರ್ಥ್ಯ ಸಹಜವಾಗಿಯೇ ಇರುವುದಿಲ್ಲ. ಆತನೂ ಉತ್ಪಾದನೆ ಮಾಡಬೇಕಾಗಿದೆಯಲ್ಲಾ? ಆತನಿಗೂ ಸೂಕ್ತ ಎನಿಸುವ ವಿಧಾನಗಳು ಸರ್ವೋದಯ ವಿಚಾರವಾಗುತ್ತದೆ.







ಒಮ್ಮೆ ಮಹಾತ್ಮ ಗಾಂಧಿಯವರು ಪ್ರಯಾಣದ ನಡುವೆ ಒಂದು ಹಳ್ಳಿಯಲ್ಲಿ ತಂಗಬೇಕಾಯಿತು. ಅವರು ಉಳಿದುಕೊಂಡ ಪ್ರದೇಶದಲ್ಲಿ ಬಹಳ ಸೊಳ್ಳೆಗಳಿದ್ದುವು. ಅವುಗಳ ಹಾವಳಿಯಿಂದ ರಾತ್ರಿ ಕಳೆಯುವುದೇ ಸಮಸ್ಯೆಯಾಗಿ ಕಂಡಿತು. ಆದರೆ ಅವರಿಗಾಗ ಈ ತೊಂದರೆ ಮುಖ್ಯ ವೆನಿಸಲಿಲ್ಲ. ಹೇಗೂ ನಾನು ಬೆಳಗಾದೊಡನೆ ಹೊರಟುಹೋಗುವವನು, ಆದರೆ ಈ ಹಳ್ಳಿಯ ಜನ ಇಲ್ಲೇ ಬದುಕಬೇಕಲ್ಲಾ? ಅವರಿಗೆ ಬಹಳ ಕನಿಕರವಾಯಿತು. ಸೊಳ್ಳೆ ದೂರಮಾಡಲು ಏನಾದರೂ ಉಪಾಯವಿದೆಯೇ ಎಂಬುದಾಗಿ ಅಲ್ಲಿ ಸೇರಿದ್ದವರನ್ನು ಪ್ರಶ್ನಿಸಿದರು. ಆಗೊಬ್ಬರು ಫ್ಯಾನ್, ಸೊಳ್ಳೆಪರದೆ ಬಳಸಿದರೆ ಹಾಯಾಗಿ ನಿದ್ರೆ ಹೋಗಬಹುದೆಂದರು. ಗಾಂಧೀಜಿಯವರಿಗೆ ಅದು ಸೂಕ್ತವೆನಿಸಲಿಲ್ಲ. ಭಾರತದ ಹಳ್ಳಿಯ ಕೋಟಿ ಕೋಟಿ ಜನತೆ, ಅದೂ ಬಡವರು, ಹೊಟ್ಟೆಗೆ ತುಂಬಿಸಿಕೊಳ್ಳುವುದೇ ಕಷ್ಟವಿರುವಾಗ ಅಷ್ಟೊಂದು ಸಂಖ್ಯೆ ನೆಟ್ಟುಗಳನ್ನೆಲ್ಲಿಂದ ತರಲಿ ? ಅದು ಕಾರ್ಯಗತವಾಗುವಂತದ್ದಲ್ಲ ಅಂದರು. ಬಡವರಿಗೆ ನಿಲುಕುವ ಸಾಧನ ಅದಾಗಿರಬೇಕು. ಮಲಗುವ ಮೊದಲು ಅಂಗೈಗೆ ಸ್ವಲ್ಪ ತೆಂಗಿನೆಣ್ಣೆ ಮತ್ತು ಕೆಲವು ಹನಿ ಸೀಮೆಎಣ್ಣೆ ಹಾಕಿ ಬೆರಸಿ ಮೈಗೆ ಸವರಿಕೊಂಡು ಮಲಗಿ ಬಿಟ್ಟರು. ರಾತ್ರಿ ಯಾವುದೇ ಸೊಳ್ಳೆ ಅವರಿಗೆ ತೊಂದರೆ ಕೊಡಲಿಲ್ಲ. ಹಾಗೆಯೇ ಗಾಂಧೀಜಿಯವರು ಹಸುವಿನ ಹಾಲಿನ ಬದಲಿಗೆ ಆಡಿನ ಹಾಲು ಬಳಸುತ್ತಿದ್ದರು. ಯಾಕೆಂದರೆ ಬಡವನಾದರೂ ಆಡು ಸಾಕಬಲ್ಲ ಹಾಗಾಗಿ ತಳಮಟ್ಟದ ಜನತೆಗೆ ಸಾರ್ವತ್ರಿಕವಾಗುವಂತಹದ್ದೇ ಸರ್ವೋದಯ ವಾಗುತ್ತದೆ.

## ಜಾನುವಾರು ಸಾಕಣೆ

ಜಾನುವಾರುಗಳು ಬಡವರ ಬಂಧುಗಳು, ನನ್ನ ಕಷ್ಟದ ದಿನಗಳಲ್ಲಿ ಅವುಗಳಿಂದ ಬಹಳ ಉಪಕಾರ ಹೊಂದಿದ್ದೇನೆ. ಒಂದು ಎಕ್ರೆ ಜಮೀನು, ಒಂದು ಜೊತೆ ಜಾನುವಾರು ಇದ್ದರೆ ಸುಖವಾಗಿ ಬದುಕು ಸಾಗಿಸಬಹುದು. ಹದ ತರದ ಬಾವಿ ಬಳಸಿ ಧಾರಾಳ ಹುಲ್ಲು ಬೆಳಸಿಕೊಂಡು ಸ್ವತಂತ್ರ ಜೀವನ ಸಾಗಿಸಬಹುದು. ತೆಂಗಿನ ಸಸಿಗಳ ನಡುವೆ ಸಹಜವಾಗಿ ಬೆಳೆಯುವ ಹುಲ್ಲನ್ನೇ ಬಳೆಸುತ್ತಿದ್ದೆ. ಕಳೆಗಿಡಗಳನ್ನು ಆಗಾಗ ಸವರುತ್ತಿದ್ದರೆ ಹುಲ್ಲು ಬೆಳೆಯಲು ತುಂಬಾ ಅನುಕೂಲ. ಅವುಗಳೊಂದಿಗೆ ಹುಲುಸಾಗಿ ಬೆಳೆಯುವ ನಾಚಿಕೆ ಮುಳ್ಳುಗಳನ್ನು ಕಿತ್ತು ತೆಂಗಿನ ಮರದ ಬುಡಕ್ಕೆ ರಾಶಿ ಹಾಕಿದರೆ

ಅದೇ ಉತ್ತಮ ಗೊಬ್ಬರವಾಗುತ್ತದೆ. ಈ ಹಸಿ ಹುಲ್ಲಿನ ಸಂತಾನವನ್ನು ದೇವರು ನಮ್ಮ ಜಾನುವಾರುಗಳಿಗಾಗಿಯೇ ಇರಗೊಳಿಸಿದ್ದಾನೆ. ವೈಶಾಖದ ದಿನಗಳಲ್ಲಿ ಹಸಿಹುಲ್ಲು ಹೆಚ್ಚು ಕೊಟ್ಟರೆ ಆಕಳಿಗೆ ಹೆಚ್ಚು ಸುಖ. ಹಾಗೆಯೇ ಜಡಿ ಮಳೆಯ ದಿನಗಳಲ್ಲಿ ಬೈಹುಲ್ಲು, ಒಣಹುಲ್ಲು ಸಂಗ್ರಹಿಸಿ ಕೊಡಬೇಕು. ನನ್ನ ಭೂಮಿಗೆ ಧಾರಾಳ ನೀರಾಶ್ರಯ ಇಲ್ಲದಿದ್ದ ಕಾರಣ ಸುಬಾಬುಲ್ ಬೆಳೆಸುತ್ತೇನೆ. ನೂರಿನ್ನೂರು ಗಿಡಗಳ ಜೊತೆಗೆ ನೇಪಿಯರ್ ಗ್ರಾಸ್ ಎಂಬ ಒಂದು ಜಾತಿ ಹುಲ್ಲು ಬೆಳೆಯತೊಡಗಿದೆ. ಒಮ್ಮೆ ಎಲ್ಲಾದರೂ ನೆಟ್ಟರೆ ಸಾಕು ದುರ್ಬೀಜದ ಹಾಗೆ ತೋಟದ ತುಂಬಾ ಹರಡಿಕೊಳ್ಳುತ್ತದೆ. ಎಂತಹ ಸುಡುಬಿಸಿಲಿಗೂ ಅದರ ಗೆಡ್ಡೆ ಸಾಯುವುದಿಲ್ಲ. ಮೊದಲ ಮಳೆಗೇ ಚಿಗುರೊಡೆಯುತ್ತದೆ. ಇಂತಹ ಪರಿಪಾಠ ಮಾಡಿಕೊಂಡ ನನಗೆ ಜಾನುವಾರು ಅತ್ಯಂತ ಲಾಭದಾಯಕವಾಗಿ ಕಂಡುಬಂದಿದೆ.

ಕೃಷಿ ಚಟುವಟಿಕೆಗಳು ಪರಸ್ಪರ ಪೂರಕವಾಗಿದ್ದರೆ ಮಾತ್ರ ಲಾಭದಾಯಕ. ಹುಲ್ಲು ಜಾನುವಾರುಗಳಿಗಾದರೆ ಜಾನುವಾರುಗಳು ನನಗಾಗಿದ್ದುವು. ಪರಿಶುದ್ಧವಾದ ಹಾಲು, ಮೊಸರು, ಬೆಣ್ಣೆ ಮೊದಲಾದ ಉತ್ಪನ್ನಗಳು ನನ್ನ ಆಹಾರದ ಗುಣಮಟ್ಟವನ್ನು ಹೆಚ್ಚಿಸಿದುವು. ಸಗಣಿ, ಗಂಜಳ ಉತ್ತಮ ಗೊಬ್ಬರ. ಅವುಗಳ ಹಸಿರೆಲೆಗಳನ್ನು ಕರಗಿಸಿ ಹಟ್ಟಿಗೊಬ್ಬರ ರೂಪಿಸಿದುವು. ಇವುಗಳು ನನ್ನನ್ನು ಕಾಯುವ ತೆಂಗು, ಬಾಳೆ, ತರಕಾರಿಗಳಿಗೆ ಆಹಾರವಾಗಿ ಕೊಡುತ್ತಿದ್ದೆ. ಗಿಡಮರಗಳು, ಜಾನುವಾರುಗಳು ಮತ್ತು ನಾವು ಪರಸ್ಪರ ಪೂರಕವಾಗಿ ಬದುಕು ಸಾಗಿಸುತ್ತಾ ಬಂದ ಕಾರಣ ನಾವು ಸುಖ ಪಡೆದೆವು. ನಾವು ಪರಸ್ಪರ ಉಪದ್ರವಿಗಳಾಗದೇ ಅನ್ಯೋನ್ಯತೆಯಿಂದಿದ್ದೆವು. ನಮ್ಮ ತೋಟದಲ್ಲಿ ಧಾರಾಳ ಬೆಳೆಯತೊಡಗಿದ ಬಾಳೆಗೊನೆಗಳನ್ನು ನಾನು ಪಡೆದರೆ ಹಸಿ ಎಲೆಗಳನ್ನು ಹಸುಗಳಿಗೆ ಹಂಚುತ್ತಿದ್ದೆ. ಅವುಗಳಿಗೂ ಖುಷಿ ಯಾಗುತ್ತಿತ್ತು. ಅವುಗಳು ಬೆಳಗ್ಗೆ ಸಂಜೆ ಎರಡೂ ಹೊತ್ತು ನನಗೆ ಹಾಲು ಕೊಡುತ್ತಿದ್ದವು. ನಾನು ನಿಸರ್ಗದ ಎರಡು ಎಕ್ರೆಯ ಒಂದು ಕಛೇರಿಯ ಎಟೆಂಡರ್, ನನ್ನ ಎಮ್ಮೆ ನನ್ನ ಆಫೀಸರ್, ಹಸಿ ಹುಲ್ಲನ್ನು ನನ್ನ ಆಫೀಸರಿಗೆ ಕೊಟ್ಟರೆ ಹಾಲು, ಸಗಣಿ ತಯಾರು ಮಾಡಿ ಕೊಡುತ್ತಾರೆ. ದಿನಕ್ಕೆ ಎರಡು ಸಾರಿ ಸಂಬಳ ಕೊಡುತ್ತಾರೆ. ನನಗೆ ನಿವೃತ್ತಿಯಾಗಿ ಕೆಲಸ ಕಳೆದುಕೊಳ್ಳುವ ಭಯ ಇಲ್ಲ.

ಒಮ್ಮೆ ಹೀಗೊಂದು ಘಟನೆ ನಡೆಯಿತು. ನನ್ನ ತೋಟದ ಕೃಷಿ ನೋಡುವ ಉದ್ದೇಶದಿಂದ ಸರಕಾರಿ ನೌಕರಿಯಲ್ಲಿರುವವರೊಬ್ಬರು

ಬಂದರು. ಬಹಳ ಆಸಕ್ತಿಯಿಂದ ತೋಟ ಸುತ್ತಾಡಿ ಬಂದು ಅದು ಇದು ಮಾತು ತೆಗೆದು ಕೊನೆಗೊಂದು ಮಾತು ತೆಗೆದರು. "ನೋಡಿ ರಾಮಚಂದ್ರ ರಾಯರೇ, ಕೃಷಿ ಲಾಭದಾಯಕವೆಂದು ನೀವು ಹೇಳುತ್ತೀರಿ, ನಾವು ನೌಕರಿಯಲ್ಲಿರುವವರು ನಿವೃತ್ತಿಯಾದಾಗ ಲಕ್ಷಕ್ಕೂ ಮಿಕ್ಕಿದ ಹಣ ಕೈಗೆ ಬರುತ್ತದೆ. ಆದರೆ ನಿಮಗೆಲ್ಲಿಂದ ಸಿಗುತ್ತದೆ?" ಎಂದು ಪ್ರಶ್ನಿಸಿದರು. ನಾನು ತುಸು ಯೋಚಿಸಿದಂತೆ ಹೇಳಿದೆ. ಎಕ್ರೆ ಜಮೀನಿಗೆ ರೂಪಾಯಿ ೨೫೦ರ ಮೌಲ್ಯವಿರುವಾಗ ನಾನು ಮೂಲಗೇಣಿಗೆ ಪಡೆದುಕೊಂಡಿದ್ದೆ, ಆದರೆ ಈಗ ಲಕ್ಷಗಟ್ಟಲೆ ಉಳಿತಾಯದಲ್ಲಿದ್ದೇನೆ. ನಾನಿಂದು ಮಾರಾಟ ಮಾಡಿದರೆ ನಾಲ್ಕೈದು ಲಕ್ಷ ಕೈಗೆ ಬರುತ್ತದೆ. ಆದರೆ ನಾನು ಹಾಗೆ ಮಾಡುವುದಿಲ್ಲ. ನನ್ನ ಮಕ್ಕಳಿಗೆ, ಮೊಮ್ಮಕ್ಕಳಿಗೂ ಈಗಲೇ ನೌಕರಿ ಕಾದಿರಿಸಿಕೊಂಡಿದ್ದೇನೆ. ಅವರು ನೌಕರಿಗಾಗಿ ಕಷ್ಟಪಡುವ ಅಗತ್ಯವೇ ಬರಲಾರದು. ನನ್ನ ಮಾತು ಅವರಿಗೆ ಸರಿ ಎನಿಸಿ ಮೌನವಾದರು. ಹೀಗಾಗಿ ಕೃಷಿ ಜಮೀನು ಹೊಂದಿದವರು ನಿರುದ್ಯೋಗಿಗಳಾಗುವುದೇ ಇಲ್ಲ. ಸಂತಾನ ಪರ್ಯಂತ ಅವರು ಉದ್ಯೋಗ ಹೊಂದಿರುತ್ತಾರೆ. ಈ ತಿರುಳು ಅರಿತುಕೊಳ್ಳುವ ಅವಶ್ಯಕತೆ ಇದೆ. ಇದರಿಂದಾಗಿ ದೇಶದಲ್ಲಿ ನಿರುದ್ಯೋಗ ಸಮಸ್ಯೆ ಇಲ್ಲವಾಗಿಸಬಹುದು. ಕಬೀರದಾಸ ದೈವಭಕ್ತ ಅನಿಸಿಕೊಂಡರೂ ಹಸಿವಿನ ಮಹತ್ವ ಅರಿತು ಕೊಂಡವನು. ಹಳ್ಳಿಯಲ್ಲೊಂದು ಗಾದೆ ಮಾತಿದೆ. ಮನೆಗೆ ಬೆಂಕಿ ಬಿದ್ದರೆ ಮಲಗದ್ದೆಯಲ್ಲಿ ನಿಲ್ಲಬಹುದು; ಹೊಟ್ಟೆಗೆ ಬೆಂಕಿ ಬಿದ್ದರೆ ಎಲ್ಲಿ ನಿಲ್ಲುವುದು?

## ಯಾಂತ್ರೀಕರಣ ಸ್ವಾವಲಂಬನೆಗೆ ಮಾರಕ

ನನ್ನನ್ನು ಎಷ್ಟೋ ಜನ ಪ್ರಶ್ನಿಸುತ್ತಾರೆ. "ನೀವು ಯಾಕೆ ಯಂತ್ರಗಳ ಉಪಯೋಗ ಮಾಡುವುದಿಲ್ಲ? ಅವುಗಳನ್ನು ಬಳಸಿದರೆ ಹೆಚ್ಚು ಲಾಭ ಪಡೆಯಬಹುದಲ್ಲಾ?" ಎಂದು.

ಕೈಗಾರಿಕಾ ಕ್ರಾಂತಿಯ ನಂತರ ಬೆಳೆದು ಬಂದ ಯಾಂತ್ರೀಕೃತ ಬೇಸಾಯ ರೈತರಿಗಾಗಲೀ ಬಡ ರಾಷ್ಟ್ರಗಳಿಗಾಗಲೀ ಹೇಳಿಸಿದ್ದಲ್ಲ. ಅವುಗಳು ಅನುಕೂಲಕ್ಕಿಂತ ಹೆಚ್ಚು ತೊಂದರೆಗಳನ್ನೇ ತರುತ್ತವೆ. ನಮ್ಮ ಉತ್ಪತ್ತಿಯಲ್ಲಿ ಬಹುಪಾಲು ಅದು ತಿಂದು ಹಾಕುತ್ತದೆ. ಅವುಗಳಿಗೆ ದೊಡ್ಡ ಬಂಡವಾಳ ಬೇಕು. ನಮ್ಮ ರೈತರಲ್ಲಿ ಉಳಿಕೆ ಇಲ್ಲ. ಹಾಗಾಗಿ ಅವರು ಸಾಲಗಾರ ರಾಗುತ್ತಾರೆ. ಗೊಬ್ಬರ, ಪಂಪುಸೆಟ್ಟು, ಬೀಜ, ಕೀಟನಾಶಕ, ಹಲ್ಲರು, ಟಿಲ್ಲರು ಅವುಗಳಿಗೆ ಇಂಧನ ಎಲ್ಲವೂ ರೈತರನ್ನು ಪರಾವಲಂಬಿಗಳನ್ನಾಗಿಸುತ್ತದೆ.

ಇವುಗಳಿಗಾಗಿ ಬ್ಯಾಂಕಿಗೆ ಯಾ ಖಾಸಗಿ ಸಾಲಕ್ಕೆ ಬಲಿಯಾಗುತ್ತಾನೆ. ನಮ್ಮ ಬ್ಯಾಂಕುಗಳು ಬಹುರಾಷ್ಟ್ರೀಯ ಬಂಡವಾಳದಾರರ ಅಧೀನವಾಗುತ್ತದೆ. ಇದರಿಂದ ದೇಶದ ಸಂಪತ್ತು ಪರಾಧೀನವಾಗುತ್ತದೆ. ಒಟ್ಟಾರೆಯಾಗಿ ಬೆಳೆಸುವವನ ಖರ್ಚು ಹೆಚ್ಚುತ್ತಲೇ ಹೋಗುತ್ತದೆ.

ಕೈಸಾಧನೆಯಿಂದಲೇ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಿರುವಾಗ ಯಂತ್ರಗಳ ಬಂಡಾಟ ಯಾಕೆ? ಈಗಾಗಲೇ ಇಂಧನಗಳ ಕೊರತೆ, ವಿದ್ಯುತ್ ಕೊರತೆಗಳನ್ನು ಎದುರಿಸುತ್ತಿದ್ದೇವೆ. ಇವೆಲ್ಲಾ ಭೂಮಿಯಿಂದ ಕಣ್ಮರೆ ಯಾಗುವಂತಹವುಗಳು. ಬಡವರಿಗೆ ಚಿಮಿಣಿ ಎಣ್ಣೆಯೇ ದೊರೆಯುವುದು ಕಷ್ಟವಾಗಿದೆ ಈಗ. ನಮಗಿರುವುದು ಒಂದೇ ದಾರಿ ಅಭಾವವಿರುವುದನ್ನು ಕಡಿಮೆ ಬಳಸಬೇಕು.

## ಕೈ ಕೊಡುವ ಕರೆಂಟು

"ನೀವು ವಿದ್ಯುತ್ ಬಳಸಿದರೆ ನಿಮ್ಮ ಶ್ರಮ ಉಳಿಯುವುದಲ್ಲವೇ?" ಎಂದು ಬಹಳ ಜನ ಪ್ರಶ್ನಿಸುತ್ತಾರೆ. ನೋಡಿ ಈ ಕರೆಂಟಿನಿಂದಾಗಿ ಜನ ಸುಖ ಅನುಭವಿಸುತ್ತಾರೆಂದು ಹೇಳುವುದು ಸರಿಯಲ್ಲ, ಏಕೆಂದರೆ ಕರೆಂಟು ಬರುವ ಮೊದಲೂ ಜನ ಸುಖವಾಗಿದ್ದರು. ನಮಗೆ ಬೇಕಾದಾಗ ಅದು ಇರುವುದಿಲ್ಲ. ನಮ್ಮ ವಿದ್ಯುತ್ ಉತ್ಪಾದನೆ ಎಲ್ಲರಿಗೂ ಸಾಕಾಗುವಷ್ಟಿಲ್ಲ. ವಿದ್ಯುತ್ ಸ್ಥಾವರಗಳು ಆಪತ್ತಿನಲ್ಲಿವೆ. ಜಲಾಶಯಗಳು ನಾನಾ ರೀತಿಯ ಅಡಚಣೆಗಳನ್ನೆದುರುಸುತ್ತಿವೆ. ಇಷ್ಟಕ್ಕೂ ನಮ್ಮ ರೈತರು ಬಂಡವಾಳ ಸುರಿಯಬೇಕಲ್ಲಾ. ಕರೆಂಟು ಯಂತ್ರ ಕೆಟ್ಟುಹೋದಾಗ ನಾನು ತಲೆಬಿಸಿ ಮಾಡುವ ಸಾಧ್ಯತೆಗಳಿಂದ ದೂರವಿದ್ದೇನೆ ಅಷ್ಟೇ. ದೈಹಿಕ ಶ್ರಮ ಬಳಕೆಯಾಗುವಲ್ಲಿ ಸಮಸ್ಯೆಗಳು ಕಡಿಮೆ ಇರುತ್ತವೆ ಎಂಬುದಾಗಿ ಮಹಾತ್ಮಾ ಗಾಂಧಿಯವರು ಹೇಳುತ್ತಿದ್ದರು.

## ಏನೂ ಇಲ್ಲದಲ್ಲಿ ಎಲ್ಲವೂ ಇದೆ

ಬಹಳ ಹಿಂದೆ ಸಾಕ್ರೆಟಿಸ್ ಎಂಬ ಗ್ರೀಕ್ ತತ್ವಜ್ಞಾನಿ ಒಂದು ಮಾತು ಹೇಳಿದ್ದಾನೆ. ಏನೆಂದರೆ, ಏನೂ ಇಲ್ಲದಲ್ಲಿ ಎಲ್ಲವೂ ಇದೆ. ಅದರ ಹಿನ್ನೆಲೆ ಹೀಗಿದೆ, ಒಂದು ದಿನ ಭಿಕ್ಷುಕನೊಬ್ಬ ಆತನ ಮುಂದೆ ನಿಂತು " ನನ್ನಲ್ಲಿ ಏನೂ ಇಲ್ಲ, ನೀವಾದರೋ ಉಳ್ಳವರು ನನಗೆ ಏನಾದರೂ ನೀಡಿ" ಎಂದು ಅಂಗಲಾಚಿದ. ಸಾಕ್ರೆಟಿಸ್, "ನಿನ್ನಲ್ಲಿ ಏನೂ ಇಲ್ಲವೇ?" ಎಂದು ಚೌಕಾಶಿಗೆ

ತೊಡಗಿದರು. ಭಿಕ್ಷುಕ "ನಿಜವಾಗಿಯೂ ಏನೂ ಇಲ್ಲ, ಇರುತ್ತಿದ್ದರೆ ನಾನ್ಯಾಕೆ ಭಿಕ್ಷೆ ಬೇಡಲಿ, ನನಗೆ ಅದು ಇಷ್ಟವಾಗದ ಕೆಲಸ ಆದರೂ ಬದುಕುವುದಕ್ಕಾಗಿ ಕೈ ಚಾಚುತ್ತಿದ್ದೇನೆ" ಎಂದ. ಅದಕ್ಕುತ್ತರವಾಗಿ ಸಾಕ್ರೆಟಿಸ್ "ಅಯ್ಯೋ ನಿನ್ನಲ್ಲಿ ಆ ದೇವರು ಕೊಟ್ಟ ಎರಡೆರಡು ಜೊತೆ ಕಾಲು, ಕೈ, ಕಣ್ಣು, ಕಿವಿಗಳಿವೆಯಲ್ಲಾ! ನಿನ್ನಲ್ಲಿರುವ ಅಮೂಲ್ಯ ಸೊತ್ತುಗಳಲ್ಲಿ ಎರಡು ಕಾಲುಗಳನ್ನು ಕೊಡು ನಾನು ಎರಡು ಸಾವಿರ ರೂಪಾಯಿ ಕೊಡುತ್ತೇನೆ" ಅಂದರು. ಅದಕ್ಕವನು, " ಅಬ್ಬಬ್ಬಾ....!ಅದು ಕೊಡಲು ಸಾಧ್ಯವೇ?" ಎಂದ. ಹಾಗೆಯೇ ಕಣ್ಣು, ಕೈ, ಮೆದುಳು, ಇವೆಯಲ್ಲಾ ... ಹೀಗೇ ಲೆಕ್ಕ ಹಾಕುತ್ತಾ ಹೋದರೆ ಒಂದೆರಡು ಲಕ್ಷ ಹಣ ಸಿಗಬಹುದೆಂದು ಸಾಕ್ರೆಟಿಸ್ ಹೇಳಿದ. ಬಹಳ ಯೋಚಿಸತೊಡಗಿದ ಭಿಕ್ಷುಕನಿಗೆ ತಿಳುವಳಿಕೆ ಬರತೊಡಗಿತು. ನಾನು ನನ್ನ ದೇಹದ ಅವಯವಗಳನ್ನು ಬಂಡವಾಳವಾಗಿಸಿ ಏನಾದರೂ ಉತ್ಪಾದನೆ ಮಾಡಬೇಕೆಂದು ನಿರ್ಧರಿಸಿ ಸಾಕ್ರೆಟಿಸ್‌ನಿಗೆ ಕೃತಜ್ಞತೆ ಹೇಳಿ ಹೊರಟು ಹೋದ.

ನಾನು ಆ ಭಿಕ್ಷುಕನಿಗಿಂತಲೂ ಅಧೋಗತಿಯಲ್ಲಿದ್ದೆ. ನಾನು ನನ್ನ ದಿನ ನಿತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಯಾರ್‍ಯಾರನ್ನೋ ಅಂಗ ಲಾಚುತ್ತಿದ್ದೆ. ಒಂದು ಹೊತ್ತಿನ ಊಟಕ್ಕಾಗಿ ಪರಿತಪಿಸುತ್ತಿದ್ದೆ.ಇನ್ನೊಬ್ಬರಿಂದ ಬೇಡಿ ಪಡೆಯುವುದು ಅಸಾಧ್ಯವೆನಿಸಿದಾಗ ಉಪವಾಸವೋ ಅರೆ ಹೊಟ್ಟೆಯಲ್ಲೋ ಬದುಕು ಸಾಗಿಸಿದ್ದೆ. ಆದರೆ ನಾನು ಸ್ವಾವಲಂಬಿಯಾಗ ಬೇಕೆನ್ನುವ ಉತ್ಕಟ ಬಯಕೆಯನ್ನು ಹೊಟ್ಟೆಯಲ್ಲಿರಿಸಿಕೊಂಡೇ ಸಾಧಿಸತೊಡಗಿದೆ. ಹಾಗಾಗಿ ನನ್ನಂತೆ ಹಸಿವಿನಿಂದ ಬಸವಳಿಯುತ್ತಿರುವವರಿಗೆ ನಾನು ಹೇಳಲೇಬೇಕಾದ ವಿಷಯಗಳಿವೆ. ನನ್ನ ಕೈಗೆ ಬಂದ ಎರಡೂವರೆ ಎಕ್ರೆ ತುಂಡು ಜಮೀನಿನಲ್ಲಿ ದೇವರು ನನಗಾಗಿ ಕೊಟ್ಟ ಕೈಗಳನ್ನು, ಮೈಮನ-ಮಿದುಳುಗಳನ್ನು ಬಳಸಿ ಕೃಷಿ ಕೆಲಸ ಆರಂಭಿಸಿದೆ. ನಾನು ಬೆಳೆಸಿಕೊಂಡ ಉತ್ಪಾದನಾ ಕೌಶಲ್ಯಗಳು ನನಗೆ ಸಹಾಯ ಮಾಡಿದವು. ಪ್ರಕೃತಿಯೊಂದಿಗೆ ಸಂಧಾನ ಮಾಡಿಕೊಂಡೆ. ನನ್ನ ದುಡಿಮೆಗೆ ತಕ್ಕ ಪ್ರತಿಫಲ ದೊರೆಯಿತು. ನನ್ನ ಮೇಲೆ ಪ್ರಕೃತಿ ಮುನಿಸಿಕೊಳ್ಳಲಿಲ್ಲ. ನನ್ನನ್ನು ಪ್ರೀತಿಯಿಂದ ಎತ್ತಿ ಮುದ್ದಾಡಿಸುತ್ತಾಳೆ. ನಮ್ಮೆಲ್ಲರ ಕಷ್ಟಗಳನ್ನು ಪರಿಹರಿಸುವ ಶಕ್ತಿ ಆಕೆಯಲ್ಲಿದೆ.

# ನಿಸರ್ಗದ ಕಡೆಗೆ

ಪ್ರಾಣಿ ಪಕ್ಷಿಗಳು ಮಾನವನಿಗಿಂತ ಸರಳ ಬದುಕು ಸಾಗಿಸುತ್ತವೆ. ಹಾಗಾಗಿ ಅವು ಮಾನವರಿಗಿಂತ ಸುಖಿಗಳು. ಆಧುನಿಕ ಮಾನವ ಬದುಕನ್ನು ಸಂಕೀರ್ಣ ಗೊಳಿಸತೊಡಗಿದ್ದರಿಂದಲೇ ಒಂದರಮೇಲೊಂದು ಸಮಸ್ಯೆ ಬಗೆಹರಿಸುವುದೇ ಆತನ ದಿನಚರಿಯಾಗಿಬಿಟ್ಟಿದೆ. ಮಾತುಬರದ, ಯಂತ್ರ ತಂತ್ರ ಬಳಸದ ಜೀವರಾಶಿಗಳು ತಮ್ಮ ಜೀವನವನ್ನು ಪ್ರಕೃತಿಯೊಂದಿಗೆ ನಿಕಟಗೊಳಿಸುತ್ತವೆ. ತಮ್ಮ ಜೀವನಾಧಾರ ಆಹಾರಕ್ಕಾಗಿ ನಿಸರ್ಗದಿಂದ ದೂರವಾಗುತ್ತಾ ಬದುಕಲು ಇಷ್ಟಪಡುತ್ತಾನೆ. ಆತನ ಸಮಸ್ಯೆಗಳೂ ಇದರಿಂದಲೇ ಉದ್ಭವಿಸಿರಬೇಕು.

ದಿನ ಬೆಳಗಾದರೆ ಹಳ್ಳಿಯವರು ಪೇಟೆಯ ಬದಿ ಜಮಾಯಿಸುತ್ತಾರೆ. ನಮ್ಮ ಯುವ ಪೀಳಿಗೆ ಆಹಾರವನ್ನರಸಿ ನಗರದ ಕಡೆ ವಲಸೆ ಹೋಗುತ್ತಾರೆ. ಯಂತ್ರ-ತಂತ್ರಗಳಿಗೆ ಮಾರುಹೋಗುತ್ತಾರೆ. ತಮ್ಮ ಹಿನ್ನೆಲೆಯನ್ನು ಕಳೆದುಕೊಳ್ಳುತ್ತಾರೆ. ಪ್ರಕೃತಿಯ ಕಡೆಯಲ್ಲಿ ಸಂಕಷ್ಟಗಳು ಎದುರಾಗುವುದಕ್ಕೆ ನವನಾಗರಿಕತೆಯೇ ಕಾರಣವಾಗಿದೆ. ಜೀವನಾಧಾರ ಕಸುಬುಗಳು ಕಳೆದು ಹೋಗಿವೆ. ಬದುಕಿನ ಕೊಂಡಿಗಳು ಕಳಚಿಕೊಂಡಿವೆ. ಹಣಕಾಸು ವ್ಯವಹಾರ ಹೆಚ್ಚಿದಂತೆ ಅವುಗಳ ಅಡಚಣೆಯಿಂದಾಗಿ ನಮ್ಮ ಹಳ್ಳಿಗರು ಕಷ್ಟದಲ್ಲಿ ಸಿಲುಕಿದ್ದಾರೆ. ಹಣಕಾಸು ಇಲ್ಲದವ ಬಡವನಾದ, ನಿರ್ಗತಿಕನಾದ. ಜನತೆ ಅರೆಹೊಟ್ಟೆಯಲ್ಲಿ ಬದುಕುವ ಪರಿಸ್ಥಿತಿ ನಿರ್ಮಾಣವಾಗಿದೆ. ವಾಸಕ್ಕೆ ಮನೆ ಉಡಲಿಕ್ಕೆ ಬಟ್ಟೆ ಇಲ್ಲದೆ ಕಷ್ಟಪಡುತ್ತಾರೆ. ನಮ್ಮ ಸಮಾಜ ನೋಡುತ್ತಿದ್ದರೆ ಬಹುಮಹಡಿ ಕಟ್ಟಡದ ಬುಡದಲ್ಲೇ ಸೋರ್ಕಟೆ ಮಡಲು, ಹುಲ್ಲಿನ ಮನೆ ಮಾಡಿಕೊಂಡು ನಾಲ್ಕಾರು ಮುಗ್ಧ ಮಕ್ಕಳನ್ನು ಹಾಕಿಕೊಂಡು ಬದುಕು ಸಾಗಿಸುತ್ತಿದ್ದಾರೆ. ಪರಮಾತ್ಮನ ಸೃಷ್ಟಿಯಲ್ಲಿ ಯಾಕೆ ಹೀಗಾಯ್ತು? ಪ್ರಕೃತಿ ತಾರತಮ್ಯ ಬಯಸುತ್ತದೆಯೇ? ಇರುವ ಒಬ್ಬನೇ ಸೂರ್ಯ ಎಲ್ಲರಿಗೂ ಸಮಾನವಾಗಿ ಬೆಳಕನ್ನು ಕೊಡುತ್ತಿರುವಾಗ ಬಡವರ ಪಾಲಿಗೆ ಕತ್ತಲು ಯಾಕೆ? ತಾಯಿ ಮಕ್ಕಳಲ್ಲಿ ಭೇದ ಮಾಡುವುದಿಲ್ಲ. ಪ್ರಕೃತಿ ತನ್ನೊಂದಿಗಿರುವ ಎಲ್ಲಾ ಜೀವರಾಶಿಗಳಿಗೆ ಬೇಕುಬೇಕಾದವುಗಳನ್ನು ಅವುಗಳಿರುವಲ್ಲೇ ಇರಗೊಳಿಸಿದ್ದಾಳೆ.

ನಾನು ವಾಸಿಸುತ್ತಿದ್ದ ಪ್ರದೇಶ ಮಣ್ಣು, ನೀರು, ಗಿಡ, ಮರ, ಬಳ್ಳಿ, ಹುಲ್ಲು, ಪ್ರಾಣಿ, ಪಕ್ಷಿಗಳ ಬಗ್ಗೆ ಚಿಂತಿಸುತ್ತಿದ್ದೆ. ಅವುಗಳಿಗೂ ನನಗೂ ಇರುವ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸತೊಡಗಿದೆ.



ಈ ಸಂಪತ್ತುಗಳನ್ನು ನಾಶಮಾಡದೇ ಬಳಸಲು ಶುರುಮಾಡಿದೆ. ನಾನು ಅನುಭವಿಸಿದ್ದ ಕಷ್ಟಗಳ ಬಗ್ಗೆ ನಾನು ಹೇಳಿದ್ದೆನಲ್ಲಾ? ನನ್ನಂತಿರುವವರ ಕಷ್ಟಗಳನ್ನು ಅರ್ಥಮಾಡಿಕೊಳ್ಳಬಲ್ಲೆ. ನಮ್ಮ ಕಷ್ಟಗಳಿಗೆ ಪೂರ್ವಜನ್ಮದ ಪಾಪಕಾರ್ಯಗಳೇ ಕಾರಣ ಎಂದು ನಂಬಿದವರಿದ್ದಾರೆ. ಆದರೆ ನಾನು ಹಾಗಲ್ಲ. ನಾವು ಪ್ರಕೃತಿಗೆ ಅನುಗುಣವಾಗಿ ನಡೆದುಕೊಂಡಿಲ್ಲ. ನಿಸರ್ಗ ದೊಂದಿಗೆ ಒಳ್ಳೆಯ ಸಂಬಂಧ ಕಾಪಾಡಿಕೊಂಡು ಬರಲಿಲ್ಲ. ಹಾಗಾಗಿ ಕಷ್ಟದಲ್ಲಿ ನರಳುವಂತಾಯಿತೆಂದು ಭಾವಿಸುತ್ತೇನೆ. ಮನುಷ್ಯ ಪ್ರಕೃತಿಯನ್ನು ಬಿಟ್ಟು ಎಷ್ಟೆಷ್ಟು ದೂರ ಹೋಗುತ್ತಾನೋ ಅಷ್ಟಷ್ಟು ಕಷ್ಟ ಉಂಟು ಎಂಬುದಾಗಿ ವಿನೋಬಾ ಹೇಳಿದ್ದಾರೆ. ಬಡವರನ್ನು ಭೂಮಿ ಜೊತೆ ಬದುಕುವಂತೆ ಮಾಡುವುದಕ್ಕಾಗಿಯೇ ಅವರು ಭೂದಾನ ಯಜ್ಞವನ್ನು ಪ್ರಾರಂಭಿಸಿದ್ದರು. ರಾಷ್ಟ್ರದ ಬಡತನ, ನಿರುದ್ಯೋಗ, ಕಷ್ಟ ಕಾರ್ಪಣ್ಯಗಳಿಂದ ಪಾರು ಮಾಡುವ ಶಕ್ತಿ ಭೂಮಿಯಲ್ಲಿದೆ ಎಂಬುದಾಗಿ ಅವರು ನಂಬಿದ್ದರು.

ಬಡವರು ಕೈಮುಗಿದು ಚಿಲ್ಲರೆ ದುಡ್ಡು ಕಾಣಿಕೆ ಹಾಕಿ ನನ್ನ ಬಡತನ ಹೋಗಲಾಡಿಸು ಅಂತ ಪ್ರಾರ್ಥಿಸುತ್ತಾರೆ. ನಮ್ಮ ಶ್ರೀಮಂತಿಕೆ ಕಡಿಮೆ ಆಗದೇ ಖಾಯಂ ಆಗಿರಲೆಂದು ಶ್ರೀಮಂತರು ದೇವಸ್ಥಾನ ಕಟ್ಟಿಸುತ್ತಾರೆ. ಮತ್ತು ಪ್ರಚಾರದಲ್ಲಿರುವ ದೂರ ದೂರದ ತೀರ್ಥಕ್ಷೇತ್ರಗಳಿಗೆ ಯಾತ್ರೆ ಕೈಗೊಳ್ಳುತ್ತಾರೆ. ದೇವರು ಹೆಸರುವಾಸಿ ದೇವಸ್ಥಾನಗಳಲ್ಲಿ ಬಿದ್ದಿರುತ್ತಾನೆ ಎಂಬುದು ಅವರಿಗೆ ಭ್ರಮೆ. ಇದೊಂದು ಅನವಶ್ಯಕ ಖರ್ಚಿನ ದಾರಿ. ಈ ಹಿನ್ನಲೆಯಲ್ಲಿ ವಿನೋಬಾಜಿ ಹೀಗೆ ಹೇಳಿದ್ದಾರೆ. "ಪ್ರಕೃತಿಯಲ್ಲಿರುವ ಸೊತ್ತುಗಳಲ್ಲಿ ನಾವು ದೇವರನ್ನು ನೋಡಬೇಕು". ಈ ಅರ್ಥದಲ್ಲಿ ಪ್ರಕೃತಿಯೇ ದೇವರು. ನಮ್ಮ ಪ್ರಥಮ ಪೂಜೆ, ಈ ನೆಲ-ಜಲ ಹಾಗೂ ನಿಸರ್ಗದಲ್ಲಿ ಹುದುಗಿರುವ ಸಕಲ ಜೀವರಾಶಿಗೆ ಸಲ್ಲಬೇಕು. ನಮ್ಮ ಹೆಂಡತಿ ಮಕ್ಕಳು, ಮೊಮ್ಮಕ್ಕಳಿಗೆ ಸುಖ ಸಿಗಲೆಂದು ಜನರು ಕಾಶಿ, ರಾಮೇಶ್ವರ, ಕಾವೇರಿ ಮುಂತಾದ ಕಡೆಗೆ ಸಾಲ ಮಾಡಿ ಪುಣ್ಯ ಮಾಡಿಕೊಂಡು ಬರಲು ಹೋಗುತ್ತಾರೆ. ನಮ್ಮೊಂದಿಗಿರುವ ಜಾನುವಾರುಗಳು ಅಮೃತ ಸಮಾನ ಹಾಲುಕೊಟ್ಟು ನಮಗೆ ಸುಖ ನೀಡುತ್ತವೆ. ಅವುಗಳನ್ನು ವೃದ್ಧಿಸಲು ಪ್ರಯತ್ನ ಮಾಡುವುದಿಲ್ಲ. ನಮ್ಮ ಹಸಿವು ಬಾಯಾರಿಕೆ ನೀಗಿಸುವ ಹಣ್ಣು ಕೊಡುವ ಮರಗಳನ್ನು ಪೋಷಿಸಲು ಮನಸ್ಸು ಮಾಡುವುದಿಲ್ಲ. ನಮ್ಮ ಜನತೆ ಪೂಜೆ, ಪ್ರಾರ್ಥನೆಗೆ ತೋರಿಸುವ ಶ್ರದ್ಧೆಯನ್ನು ಆಲಫಲ ಬೆಳೆಸುವಲ್ಲಿ ತೋರಿಸಿದರೆ ಖಂಡಿತವಾಗಿ ಪುಣ್ಯ ಸಂಪಾದನೆಯಾಗಿ ಮನೆಮಂದಿ ಸುಖಪಡುವುದು ಸಾಧ್ಯ.

ಐವತ್ತು ಗ್ರಾಂ ತೂಕದ ಒಂದು ಹಲಸಿನ ಬೀಜವು ಮಣ್ಣಿನಲ್ಲಿ ಬೆರೆತರೆ ತಾನಾಗಿಯೇ ಸಾವಿರಾರು ರೂಪಾಯಿಗಳ ಸುಖವನ್ನು ಜನತೆಗೆ ನೀಡುತ್ತದೆ. ಒಂದೇ ಒಂದು ತೆಂಗಿನಕಾಯಿಯನ್ನು ಮೊಳಕೆ ಬರಿಸಿ ನೆಟ್ಟು ಅದಕ್ಕೆ ಭಕ್ತಿಯಿಂದ ಕೈಮುಗಿದು ನನ್ನ ಮಕ್ಕಳಿಗೆ ಸುಖಕೊಡು ಎಂದು ಪ್ರಾರ್ಥಿಸಿದರೆ ಆರೆಂಟು ವರ್ಷದಲ್ಲಿ ಸೆಟೆದು ನಿಂತ ಮರವು ಅಷ್ಟ ದಿಕ್ಕುಗಳಿಗೆ ತನ್ನ ಹೆಡೆಗಳನ್ನು ತೆರೆದು ತನ್ನ ಕಂಕುಳಲ್ಲಿ ಫಲಭರಿತ ಗೊನೆ ಭರಿಸಿ ಕಾಲ ಕಾಲಕ್ಕೆ ಕೆಳಗಿಳಿಸಿಕೊಡುತ್ತದೆ. ತನ್ನ ದೇಹದ ಅಂಗುಲ ಅಂಗುಲಗಳನ್ನೂ ಪ್ರಾಣಿ ಪಕ್ಷಿ ಮಾನವನ ಸುಖಕ್ಕಾಗಿ ಬಳಸಲು ಕೊಡುವ ಆ ಕಲ್ಪವೃಕ್ಷದಲ್ಲೇ ನಮ್ಮ ಸುಖವಿದೆ. ಅಲ್ಲಿಯೇ ದೈವತ್ವ ಇರುತ್ತದೆ.

ನಮ್ಮ ಸುತ್ತಲಿನ ಪ್ರಕೃತಿಯಲ್ಲಿ ನಿರಂತರ ಚಟುವಟಿಕೆ ನಡೆಯು ತ್ತಿರುತ್ತದೆ. ನೆಲಕ್ಕೆ ಬಿದ್ದ ಬೀಜ ಸುಮ್ಮನಿರುವುದಿಲ್ಲ, ತನ್ನದಾಗಿಸಿಕೊಂಡು

ಮಣ್ಣು, ನೀರು ಕೂಡಾ ಸುಮ್ಮನಿರುವುದಿಲ್ಲ. ಬೀಸುವ ಗಾಳಿ, ಸೂರ್ಯನ ಶಾಖ ಕೂಡಾ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಲೇ ಇರುತ್ತವೆ. ನಮ್ಮ ಸುತ್ತಲಿರುವ ಕೀಟಗಳಾಗಲೀ ಪ್ರಾಣಿ ಪಕ್ಷಿಗಳಾಗಲೀ ತಮ್ಮ ನಿತ್ಯದ ಕೆಲಸಗಳಲ್ಲಿ ನಿರತವಾಗಿರುತ್ತವೆ. ಬೀಜ ಮೊಳಕೆಬಂದು ಬೆಳೆದು ಫಲ ಕೊಡುತ್ತದೆ ನಾವು ಉಣ್ಣುತ್ತೇವೆ. ಇದನ್ನು ಅರಿತುಕೊಂಡರೆ ಮಾತ್ರ ಕೃಷಿಯಲ್ಲಿ ಜಯ ಸಾಧಿಸಬಹುದು.

ನಾನು ಕೂಡಾ ನನ್ನ ಜೀವನದ ಇಪ್ಪತ್ತೈದು ವರ್ಷದವರೆಗೆ ಇವುಗಳನ್ನು ಅರಿತುಕೊಂಡವನಾಗಿದ್ದಿರಲಿಲ್ಲ. ಹಾಗಾಗಿ ಬಹಳ ಕಷ್ಟಪಡ ಬೇಕಾಯಿತು. ಮಹಾತ್ಮ ಗಾಂಧಿ, ವಿನೋಬಾರವರ ಪ್ರಭಾವ ಯೋಚನೆಯ ದಿಕ್ಕನ್ನು ಬದಲಿಸಿತು. ಹಾಗಾಗಿ ನಾನು ಭೂಮಿಯ ಜೊತೆ ನಿಕಟ ಸಂಬಂಧ ತೊಡಗಿದೆ. ವಿನೋಬಾ ಹೇಳುತ್ತಿದ್ದರು. ನಮ್ಮದು ನಿರುದ್ಯೋಗ, ಬಡತನವುಳ್ಳ ದೇಶ, ಕಷ್ಟ ಕಾರ್ಪಣ್ಯಗಳಿಂದ ಜನರು ನರಳುತ್ತಿದ್ದಾರೆ. ಇವುಗಳಿಂದ ಮುಕ್ತಿ ಸಿಗಬೇಕಾದರೆ ಭೂಮಿತಾಯಿಯ ಸೇವೆ ಮಾಡುವ ಅವಕಾಶ ಸಿಗುವಂತಾಗಬೇಕು. ಭೂಮಿಯ ಸ್ವಾವಲಂಬನೆ ಸಾಧಿಸಲು ಮಾರ್ಗವಾಗುತ್ತದೆ.

ನಾನು ಮಹಾತ್ಮ ಗಾಂಧೀಜಿಯವರ ವಿಚಾರ ಕೇಳಿದ್ದು, ವಿನೋಬಾ ರವರ ಕೃತಿಗಳನ್ನು ಓದಿದ್ದು ನನ್ನ ಜೀವನ ದೃಷ್ಟಿಯನ್ನೇ ಬದಲಿಸಿತು. ಪ್ರತಿಯೊಬ್ಬನೂ ತಾನು ಜೀವಿಸುತ್ತಿರುವ ಸಮಾಜದ ಒಳಿತಿಗಾಗಿ ಏನಾದರೂ ಸೇವೆ ಸಲ್ಲಿಸಬೇಕೆಂದು ವಿನೋಬಾ ಹೇಳುತ್ತಿದ್ದರು. ಸ್ವಾವಲಂಬನೆಯ ಜೀವನ ದಾರಿಯಲ್ಲಿ ನಾನು ಖಾದಿ ಕೆಲಸಕ್ಕೆ ತೊಡಗಿಸಿಕೊಂಡೆ. ಸ್ವಂತ ಬಟ್ಟೆ ನೇಯುವುದು ಆರಂಭಿಸಿದೆ. ಮಂಗಳೂರಿನ ಚರಕ ಸಂಘಕ್ಕೆ ಸೇರಿ ಚರಕ ಗಳನ್ನು ಮನೆಮನೆಗಳಿಗೆ ಕೊಟ್ಟು ನೂಲು ಮಾಡಿಸಿ ಖಾದಿ ತಯಾರಿಸುವಂತೆ ಮಾಡುತ್ತಿದ್ದೆ. ಅದರಲ್ಲಿ ವಿವಿಧ ಸಮಸ್ಯೆಗಳು ಎದುರಾಗಿ ನಮ್ಮ ಜೀವನ ಸುಧಾರಣೆಗೊಳಿಸುವುದು ಸಾಧ್ಯವಾಗಲಿಲ್ಲ. ನನ್ನ ಹಾಗೆ ಕಷ್ಟಪಡುವ ಎಷ್ಟೋ ಜನ ಈ ಸಮಾಜದಲ್ಲಿದ್ದಾರೆ. ನಮ್ಮಂತಹವರ ಕಷ್ಟ ಪರಿಹರಿಸಿಕೊಳ್ಳಲು ಏನಾದರೂ ದಾರಿ ಹುಡುಕಬೇಕೆಂಬ ಆಲೋಚನೆ ಸದಾ ನನ್ನಲ್ಲಿತ್ತು. ನಾನು ಅತಿ ಸಣ್ಣ ಹಿಡುವಳಿದಾರರ ವರ್ಗಕ್ಕೆ ಸೇರಿದವನು. ನಮ್ಮ ದೇಶದಲ್ಲಿ ನನ್ನ ವರ್ಗದವರೇ ಹೆಚ್ಚು. ನಮ್ಮ ಸಮಸ್ಯೆ ಬಗೆಹರಿದರೆ ದೇಶ ಬಹುಪಾಲು ಅಭಿವೃದ್ಧಿ ಸಾಧಿಸಿದಂತಾಗುತ್ತದೆ.

ಮಹಾತ್ಮ, ವಿನೋಬಾರವರೂ ಇದನ್ನೇ ಗುರುತಿಸಿದ್ದರು. ತುಂಡು ಭೂಮಿಯ ಜನ ಕನಿಷ್ಠ ಉತ್ಪಾದನೆ ಮಾಡಿಕೊಳ್ಳಬೇಕು. ಅಂದರೆ ತಮ್ಮ ಅನ್ನ-ವಸ್ತ್ರ ಸಿದ್ಧಪಡಿಸಿಕೊಳ್ಳಬೇಕು, ಕಾಲಕ್ರಮೇಣ ಸಂಪತ್ತು ವೃದ್ಧಿಸುತ್ತದೆ. ಆದಷ್ಟು ಖರ್ಚು ಕಡಿಮೆ ಮಾಡಿ ಹೆಚ್ಚು ಉಳಿತಾಯ ಮಾಡಬೇಕು.

## ಉಳಿತಾಯ

ಸರ್ವೋದಯ ಬದುಕಿನಲ್ಲಿ ಶ್ರಮ ವಿನಿಯೋಗಕ್ಕೆ ಆದ್ಯತೆ. ಮಾನವ ದುಡಿಮೆ ಮಾಡಬೇಕು, ಕೈಲಾಗದ ನಿರುದ್ಯೋಗಿಯಾಗಿರಬಾರದು, ನಿರುದ್ಯೋಗಿ ತನ್ನ ಹೆತ್ತವರಿಗೆ, ಕುಟುಂಬಕ್ಕೆ, ಸಮಾಜಕ್ಕೆ ಪರಾವಲಂಬಿಯಾಗುತ್ತಾನೆ. ಶ್ರಮ ಪಡುವವನಿಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರತಿಫಲ ಸಿಗುತ್ತದೆ. ಇದು ನನ್ನ ಜೀವನಾನುಭವ ಕೂಡಾ. ಜನರು ಶ್ರಮದ ಕೆಲಸವನ್ನು ಮಾಡದೇ ಅಡ್ಡದಾರಿ ಹಿಡಿಯುತ್ತಾರೆ. ಇದರಿಂದ ಕಷ್ಟ-ನಷ್ಟಗಳು ಹೆಚ್ಚುತ್ತವೆ. ಸಮಾಜ ಕಂಠಕ ರಾಗುತ್ತಾರೆ. ಉಳಿತಾಯ ಮಾಡುವುದು ದುಡಿಮೆಯಿಂದ ಸಾಧ್ಯ. ದುಡಿಮೆಯ ಗಳಿಕೆಯಲ್ಲಿನ ಒಂದು ಪಾಲು ಉಳಿಸಿಕೊಳ್ಳಲೇಬೇಕು. ಕೈಗೆ ಬಂದ ಹಣಕಾಸನ್ನು ಆಡಂಬರಕ್ಕಾಗಿ ವಿನಿಯೋಗಿಸುವುದು ಸೂಕ್ತವಲ್ಲ. ಬಹಳ ಮಂದಿ ಕುಡಿತಕ್ಕೆ, ಮದುವೆ, ಪೂಜೆ, ಹೋಮಕ್ಕಾಗಿ ದೊಡ್ಡ ಪ್ರಮಾಣದ ಹಣ ಖರ್ಚು ಮಾಡುತ್ತಾರೆ. ಇದರ ಹಿಂದೆ ಭಕ್ತಿ, ಶ್ರದ್ಧೆಗಳಿಗಿಂತ ತಮ್ಮ ಅಂತಸ್ತು ಮೆರೆಸುವುದೇ ಮುಖ್ಯವಾಗಿರುತ್ತದೆ. ಈ ದಾರಿಗಳು ಸುಖ ಕೊಡುವುದಿಲ್ಲ. ಇದರಿಂದ ಉಳಿತಾಯ ಮಾಡುವುದು ಸಾಧ್ಯವಾಗುವುದಿಲ್ಲ. ನಾವು ನಮ್ಮ ಶ್ರಮವನ್ನು ಭೂಮಿತಾಯಿಗೆ ಕೊಟ್ಟರೆ ಅವಳು ನಮಗೆ ಬೇಕಾದುದನ್ನು ಕೊಡುತ್ತಾಳೆ. ಆಕೆ ಪರಮಾತ್ಮನ ರೂಪದಲ್ಲಿರುವ ಸಮಾಜದಲ್ಲಿ ಜನರು ಪ್ರೀತಿ-ಗೌರವದಿಂದ ಬಾಳಲು ಸಾಧ್ಯ. ಅಲ್ಲಿ ಉಳಿತಾಯ ಸಂಪತ್ತು ಶೇಖರಣೆಯಾಗುತ್ತದೆ.

ಕೃಷಿಕರಾದವರು ಯಾವಾಗಲೂ ನೆನಪಿನಲ್ಲಿರಿಸಿಕೊಳ್ಳಬೇಕಾದ ವಿಚಾರ ತಾವು ಉಳಿತಾಯ ಮಾಡುವುದು. ಇದಕ್ಕಾಗಿ ಖರ್ಚು ಕಡಿಮೆ ಮಾಡಿ ಕೊಳ್ಳಬೇಕು. ಯಾವುದೇ ಕೆಲಸಕ್ಕೆ ಅಧಿಕ ಬಂಡವಾಳ ಸೂಕ್ತವಲ್ಲ, ಅಧಿಕ ಶ್ರಮ ಸೂಕ್ತ. ಹೆಚ್ಚು ಖರ್ಚು ಮಾಡಿಸುವ ಯಂತ್ರಗಳ ಬದಲಿಗೆ ಮಾನವನೇ ಸ್ವತಃ ತೊಡಗಿಸಿಕೊಳ್ಳಬೇಕು. ಯಂತ್ರಗಳು ಹಳ್ಳಿಯ ಸಂಪಾದನೆಯನ್ನು ನಗರದ ಬಂಡವಾಳದಾರರಿಗೆ ವರ್ಗಾಯಿಸುತ್ತದೆ. ವಿನೋಬಾ ಒಂದು ಉದಾಹರಣೆ ಕೊಡುತ್ತಿದ್ದರು. ಒಂದು ಅಂಗಡಿಯಲ್ಲಿ ವಿದೇಶೀ ಸೊತ್ತು

ಗಳನ್ನು ಮಾರಾಟಕ್ಕಿಟ್ಟು, ಅವುಗಳು ಜನರಿಂದ ಖರೀದಿಸಲ್ಪಟ್ಟರೆ ಬೇರೆ ದೇಶದವರು ನಮ್ಮ ದೇಶದ ಮೇಲೆ ದಾಳಿ ಮಾಡುವ ಅಗತ್ಯವೇ ಇಲ್ಲ. ಏಕೆಂದರೆ ಅವರ ಮಾಲುಗಳೇ ಜನರ ಸಂಪತ್ತಿನ ಮೇಲೆ ದಾಳಿ ಮಾಡುತ್ತವೆ. ಇದೇ ರೀತಿಯಲ್ಲಿ ನಮ್ಮ ಹಳ್ಳಿಯ ಮನೆಗಳನ್ನು ಪೇಟೆ ಪಟ್ಟಣಗಳು ದಾಳಿ ಮಾಡುತ್ತಿರುತ್ತವೆ. ಅವರ ಉಳಿತಾಯವನ್ನು ಕಬಳಿಸುವುದು ಮಾತ್ರವಲ್ಲದೇ ಸದಾ ನಗರ ಮೂಲಕ್ಕೆ ಸಾಲಗಾರರನ್ನಾಗಿ ಮಾಡುತ್ತದೆ. ಸುಖಜೀವನಕ್ಕೆ ಆಧುನಿಕ ಸೊತ್ತುಗಳೇ ಬೇಕೆಂದೇನೂ ಇಲ್ಲ. ಎಲ್ಲದಕ್ಕಿಂತಲೂ ಮೊದಲು ಹಸಿವು ನೀಗಬೇಕು. ಪ್ರಾಣಿಗಳೂ ತಮಗೆ ಬೇಕಾದ್ದನ್ನು ದಾಸ್ತಾನು ಮಾಡಲು ಬಯಸುತ್ತವೆ. ಎಲ್ಲಾ ಗೆಡ್ಡೆ ಗೆಣಸುಗಳುಳ್ಳ ಸಸ್ಯಗಳು ತಮ್ಮ ಭವಿಷ್ಯದ ಉಳಿವಿಗಾಗಿಯೇ ಅಗತ್ಯಕ್ಕಿಂತ ಹೆಚ್ಚು ಸಂಗ್ರಹಿಸಿ ಬುಡದಲ್ಲಿರಿಸುತ್ತವೆ. ಜೇನು ನೊಣಗಳೂ ಅಷ್ಟೆ ತಮಗಾಗಿಯೇ ತಮ್ಮ ಕಷ್ಟದ ಕಾಲಕ್ಕಾಗಿಯೇ ಜೇನು ಸಂಗ್ರಹಿಸಿಡುತ್ತವೆ. ಆದರೆ ಮಾನವನೇ ಅವುಗಳನ್ನು ಕಬಳಿಸುತ್ತಾನೆ. ಮಾನವ ತಾನೆಷ್ಟೆ ಜೇನು ಕಿತ್ತು ಕೊಳ್ಳುವ ಮೊದಲು ಜೇನು ಕುಟುಂಬದ ಉಳಿವಿಗಾಗಿ ಒಂದು ಪಾಲನ್ನು ಅಲ್ಲಿಯೇ ಇರಗೊಳಿಸಬೇಕು, ಹಾಗಾದರೆ ಮಾತ್ರ ಮುಂದಿನ ದಿನಗಳಲ್ಲೂ ಅವುಗಳು ಮತ್ತೆ ಜೇನು ಕೊಡಬಲ್ಲವು. ಆಧುನಿಕ ಮಾನವ ಪ್ರಕೃತಿಯ ಸಂಪತ್ತನ್ನು ಲೂಟಿ ಮಾಡಲು ಬಯಸುತ್ತಾನೆ. ಸ್ವಾಭಾವಿಕ ಸಂಪನ್ಮೂಲಗಳು ಖಾಲಿಯಾಗಿ ಭೂಮಿ ತಾಯಿಯನ್ನು ಬಂಜೆಯಾಗಿಸುವತ್ತ ಮುನ್ನುಗ್ಗುತ್ತಿದ್ದಾನೆ. ಈ ರೀತಿಯಲ್ಲಿ ನಿಸರ್ಗದ ಉಳಿಕೆಗೆ ಕೊಡಲಿ ಏಟು ಬೀಳುತ್ತಿದೆ. ಇದೇ ಮುಂದೆ ಮಾನವ ಜನಾಂಗಕ್ಕೆ ಮಾರಕವಾಗಿ ಪರಿಣಮಿಸಲಿದೆ. ಹಾಗಾಗಿ ಉಳಿತಾಯ ಸೂತ್ರದಲ್ಲಿ ತಾನು ಉಳಿಯುವುದು ಮಾತ್ರವಲ್ಲದೇ ಇತರರನ್ನೂ ಉಳಿಸುವ ಗುಣವಿದೆ.

ಗಾಂಧೀಜೀಯವರು ಹೇಳಿದ ಹಾಗೆ ದಿನದಲ್ಲಿ ಒಂದು ಹೊತ್ತು ಮನೆ ಮಂದಿಯೆಲ್ಲಾ ದುಡಿದರೆ ಕುಟುಂಬದ ಸಮಸ್ಯೆ ಬಗೆಹರಿಯುತ್ತದೆ. ನಮ್ಮ ಜಮೀನಿನಲ್ಲಿ ನಾವೆಲ್ಲಾ ಒಟ್ಟಾಗಿ ಶ್ರಮವಹಿಸಿ ದುಡಿಯುತ್ತೇವೆ. ನನ್ನ ಪತ್ನಿ ಲಕ್ಷ್ಮಿ, ಹಿರಿಯಮಗ ಮಂಜುನಾಥ, ಮಗಳು ಸುಮತಿ, ಕಿರಿಯ ಮಗ ಆನಂದ ಎಲ್ಲರೂ ಸೇರಿ ಬೆಳೆಸುತ್ತಿದ್ದೇವೆ. ನಮ್ಮ ಕೆಲಸಗಳು ಪರಸ್ಪರ ಪೂರಕವಾಗಿರುತ್ತವೆ.

ಜನತೆ ಕನಿಷ್ಠ ಎಂದರೆ ಮುಕ್ಕಾಲು ಪಾಲು ಸ್ವಾವಲಂಬಿಗಳಾಗಲೇ ಬೇಕೆಂದು ಗಾಂಧೀಜಿ ಮತ್ತು ವಿನೋಬಾ ಹೇಳುತ್ತಿದ್ದರು. ಆಗ ಮಾತ್ರ

ಅವರು ಸುಖಿಗಳಾಗಬಲ್ಲರು. ಅಂದರೆ ತಮ್ಮ ಅವಶ್ಯಕತೆಗಳನ್ನು ತಾವೇ ರೂಪಿಸಿಕೊಳ್ಳುವುದು. ಅದಕ್ಕಾಗಿ ಸ್ಥಳೀಯ ಸಂಪನ್ಮೂಲಗಳನ್ನು ಹೊಂದಿಸಿಕೊಳ್ಳಬೇಕು. ಸಣ್ಣ ಮತ್ತು ಅತಿ ಸಣ್ಣ ಹಿಡುವಳಿದಾರರಿಗೆ ಇದು ಸುಲಭ ಸರಳ ಮತ್ತು ಅನಿವಾರ್ಯ. ತಮ್ಮ ಮನೆ ಬಳಕೆಯ ತರಕಾರಿ, ಹಣ್ಣು ಹಂಪಲುಗಳನ್ನು ಬಹಳ ಸುಲಭವಾಗಿ ಬೆಳೆಯಬಹುದು. ದವಸಧಾನ್ಯ ಬೆಳೆಸಿಕೊಂಡರೆ ಜೀವನ ಹೊರೆಯುವುದು ಬಹಳ ಸುಲಭ. ಇದರ ಜೊತೆ ಕೆಲವು ಆರ್ಥಿಕ ಬೆಳೆಗಳನ್ನೂ ಮಾಡಿಕೊಂಡರೆ ಹೆಚ್ಚಿನ ಉಳಿತಾಯ ಮಾಡಬಹುದು. ಬಳಿಕ ನಮ್ಮ ಉಳಿತಾಯವೇ ನಮ್ಮೆಲ್ಲರನ್ನೂ ರಕ್ಷಿಸುತ್ತದೆ. ಅಂತಹ ಮನೆಗಳಲ್ಲಿ ಸಂಪತ್ತು ಲಕ್ಷ್ಮಿ ನೆಲಸಿಕೊಳ್ಳುತ್ತಾಳೆ. ಮನೆಮಂದಿಯ ಮನಸ್ಸು-ಹೃದಯಗಳೂ ತುಂಬಿಕೊಂಡು, ರಾಮನ ಕುಟುಂಬದಂತೆ ಅಣ್ಣ-ತಮ್ಮಂದಿರು, ಗಂಡ ಹೆಂಡತಿ ಮಕ್ಕಳು ಮರಿಗಳು ಪ್ರೀತಿ ಪ್ರೇಮ ಹಂಚಿಕೊಂಡು ಬದುಕು ಸಾಗಿಸುತ್ತಿರುತ್ತಾರೆ. ಮನೆಮಂದಿ ಎಲ್ಲಾ ಒಂದೇ ಮನಸ್ಸಿನಿಂದ ದುಡಿದರೆ ಲಕ್ಷ್ಮಿ ಕಾಲುಮುರಿದು ಬಿದ್ದು ಕೊಂಡಾಳು.

## ಬಡತನ ಎಂಬ ವಿಷದ ಮರ

ಬಡತನ ಮತ್ತಷ್ಟು ಬಡತನವನ್ನು ಹೆಚ್ಚಿಸುತ್ತದೆ. ಒಬ್ಬನ ಬಡತನ ಇತರರ ಬಡತನವನ್ನು ಹೆಚ್ಚಿಸುತ್ತದೆ. ಒಟ್ಟಾರೆಯಾಗಿ ಸಮಾಜ ಹಾಗೂ ರಾಷ್ಟ್ರದ ಬಡತನವನ್ನು ಹೆಚ್ಚಿಸುತ್ತದೆ. ಇದೊಂದು ವಿಷದ ಮರ. ಬಡವ ಸಾಲ ಮಾಡಬಾರದು. ಸಾಲಗಾರ ಬಡತನದಿಂದ ಮುಕ್ತಿ ಹೊಂದುವುದೇ ಕಷ್ಟಕರ. ವಿಷದ ಮರದ ಗೆಲ್ಲುಗಳನ್ನು ಕತ್ತರಿಸಿದರೂ ಮತ್ತೆ ಚಿಗುರೊಡೆದು ಹೆಚ್ಚು ಗೆಲ್ಲುಗಳನ್ನು ಭರಿಸಿಕೊಳ್ಳುತ್ತದೆ. ಆ ಮರದ ಬೇರುಗಳನ್ನೇ ಕಿತ್ತು ಹಾಕುವ ಪ್ರಯತ್ನ ಮಾಡಬೇಕು. ಸಾಲ ಹೊಂದಿರುವ ಕುಟುಂಬ ಏಳಿಗೆಯಾಗಲು ಉಳಿತಾಯವೊಂದೇ ದಾರಿ. ಹೆಚ್ಚು ಸಂಪಾದನೆ, ಕಡಿಮೆ ಖರ್ಚು, ಹೆಚ್ಚು ಉಳಿತಾಯದ ಸೂತ್ರ ಅನುಸರಿಸಬೇಕು.

ನಮ್ಮ ಕೆಲವು ಸಾಮಾಜಿಕ ಸಂಸ್ಥೆಗಳು ಬಡವರಿಗೆ ಸಾಮೂಹಿಕ ಮದುವೆ ಕಾರ್ಯಕ್ರಮ ನಡೆಸುತ್ತವೆ. ಇದು ಬಹಳ ಜನಪ್ರಿಯ ಕಾರ್ಯಕ್ರಮ. ಮತ್ತು ಒಳ್ಳೆಯ ಉದ್ದೇಶದಿಂದ ಕೂಡಿದೆ. ಮದುವೆಯನ್ನು ಸರಳ ಗೊಳಿಸಿದಷ್ಟು ಉಳಿತಾಯ ಹೆಚ್ಚುತ್ತದೆ. ಸಾಲದ ಹೊರೆ ಕಡಿಮೆಯಾಗುತ್ತದೆ. ಆದರೆ ಒಂಟಿಯಾದವನನ್ನು ಕುಟುಂಬವಾಗಿಸುತ್ತದೆ. ಒಂದೇ ವರ್ಷದೊಳಗೆ ಆತನ ಕೌಟುಂಬಿಕ ಹೊರೆ ವೃದ್ಧಿಸುತ್ತದೆ. ಮದುವೆಯಾದವನಿಗೆ ನಾಳೆ

ಮಕ್ಕಳಾಗದೆ ಇರುವುದಿಲ್ಲ. ಮದುವೆ ಖರ್ಚನ್ನು ಭರಿಸಲಾರದವ ಸಂಸಾರದ ಭಾರ ಹೊರುವುದಾದರೂ ಹೇಗೆ ?

ವರ್ಷದಿಂದ ವರ್ಷಕ್ಕೆ ಉತ್ಪಾದನೆ ಕಡಿಮೆಯಾಗುತ್ತದೆ. ಮಕ್ಕಳ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ನನಗೂ ಇಂತಹ ಸಮಸ್ಯೆ ಎದುರಾಗಿತ್ತು. ಹೊಣೆ ಹೊರದೆ ಬೇರೆ ದಾರಿ ಇರುವುದಿಲ್ಲ. ಕುಟುಂಬದ ಆರೋಗ್ಯ ಕಾಪಾಡುವುದು, ಹೊಟ್ಟೆ ಹೊರೆಯುವುದು ಜೊತೆಗೆ ಉತ್ಪಾದನೆ ಕೆಲಸದಲ್ಲಿ ತೊಡಗುವುದು ಒಟ್ಟಾರೆಯಾಗಿ ಸಮಸ್ಯೆಗಳ ಭಾರ ತಾಳಿಕೊಳ್ಳುವ ಸಾಮರ್ಥ್ಯಬೇಕಲ್ಲಾ? ಕರಿಮಣಿ ಮತ್ತು ಮದುವೆ ಸೀರೆ ಸಂಸಾರದ ಬದುಕಿಗೆ ಸಾಕಾಗುವುದಿಲ್ಲ. ಆತ ಶಾಶ್ವತವಾಗಿ ಬಡತನದ ಬಲೆಯಲ್ಲಿ ನರಳ ಬೇಕಾಗುತ್ತದೆ. ಸಣ್ಣ ಕುಟುಂಬಗಳಲ್ಲಿ ವಿವಾಹದ ಮೊದಲು ಜೀವನಾಧಾರ ಕಸುಬು ರೂಪಿಸಿಕೊಂಡಿರಲೇಬೇಕು. ನನ್ನ ವೈಯಕ್ತಿಕ ಬಳಲಿಕೆಯಿಂದ ನಾನು ಬಹಳಷ್ಟು ಕಲಿತುಕೊಂಡೆ, ಇತರರ ಕಷ್ಟಗಳೂ ನನಗೆ ಅರಿವಾಗತೊಡಗಿದೆ. ಬಡವರ ಸಂಸಾರಗಳು ನಗರಕ್ಕೆ ವಲಸೆಯಾಗುವುದು ಉತ್ತಮ ಲಕ್ಷಣವಲ್ಲ. ಅಥವಾ ಇನ್ನೊಂದು ಸಂಸಾರಕ್ಕೆ ಹೊರೆಯಾಗಲೂಬಾರದು. ಅಂತೆಯೇ ಬೇರೊಬ್ಬರ ಹಂಗು ಅಧೀನದಲ್ಲಿರುವಂತಾಗಬಾರದು. ಇದಕ್ಕಾಗಿಯೇ ಸ್ವಾವಲಂಬನೆಯ ಮಾರ್ಗ ಅನುಸರಿಸಬೇಕು. ಹೀಗೇ ಪ್ರತಿಯೊಂದು ಕುಟುಂಬ ಕೂಡಾ ಮುಕ್ಕಾಲು ಪಾಲು ಸ್ವತಂತ್ರವಾದರೆ ದೇಶ ಮುಕ್ಕಾಲು ಪಾಲು ಸ್ವಾವಲಂಬಿಯಾದಂತೆ ಆಗುತ್ತದೆ. ದೇಶದ ಶೇ. ೭೦ ಭೂಮಿಯ ಸಂಪರ್ಕ ಇರಿಸಿಕೊಳ್ಳುವುದಲ್ಲದೇ ಸ್ವಾವಲಂಬಿಗಳೂ ಆಗಿರಬೇಕು.

## ಕೃಷಿಕರ ಸೋಲು

ಕೃಷಿಕರು ತಮ್ಮದಲ್ಲದ ಸೊತ್ತು ಸಾಧನಗಳಾದ ಯಂತ್ರ, ತಂತ್ರ, ಇಂಧನ, ಬೀಜ, ಗೊಬ್ಬರ, ಬಂಡವಾಳ, ಕೀಟನಾಶಕಗಳ ಮೊರೆ ಹೋಗುತ್ತಿರುವುದೇ ಅವರ ಸೋಲಿಗೆ ಕಾರಣ. ಬೆಳೆಗಳ ವಾಣಿಜ್ಯೀಕರಣಕ್ಕೂ ಇದೇ ಕಾರಣ. ಮಾನವ ಶ್ರಮ ಉಳಿಸುವುದು ಮತ್ತು ಬಂಡವಾಳವನ್ನು ಕೃಷಿ ಕ್ಷೇತ್ರಕ್ಕೆ ನಿಕಟಗೊಳಿಸುವುದು. ಆಧುನಿಕ ಯಾಂತ್ರೀಕೃತ ಬೇಸಾಯದ ನಿಯಮ, ಇದರಿಂದ ಬಂಡವಾಳದಾರರೇ ಉತ್ಪಾದನೆಯನ್ನು ಕಬಳಿಸುತ್ತಾರೆ. ರೈತರು ಬಡವರಾಗುತ್ತಾರೆ. ರೈತ ಭೂಮಿಯ ಒಡೆಯನಾದರೂ ಆತನಿಗೆ ಅದೇ ಭೂಮಿಯ ಉತ್ಪಾದನೆ ದಕ್ಕುವುದಿಲ್ಲ, ಏಕೆಂದರೆ ಆತ ಕೃಷಿ ಸಾಲ ಪಡೆದ ಬ್ಯಾಂಕಿಗೆ ಬಡ್ಡಿ ರೂಪದಲ್ಲಿ, ಕೀಟನಾಶಕ, ಗೊಬ್ಬರ ನೀಡಿದ ಕಾರ್ಖಾನೆಗೆ,

ಉಳುಮೆಗೆ ಸಹಾಯಮಾಡಿದ ಟಿಲ್ಲರಿನ ತಯಾರಕನಿಗೆ, ಯಂತ್ರಗಳ ಇಂಧನಕ್ಕೆ, ವಿದ್ಯುತ್ ಒದಗಿಸಿದವರಿಗೆ ಹೀಗೆ ಎಲ್ಲರಿಗೂ ಪಾಲುಕೊಟ್ಟ ಮೇಲೆ ರೈತನಿಗೆ ಉಳಿಯುವುದು ಏನೂ ಇಲ್ಲ. ಇನ್ನು ಫಸಲು ಬರದೇ ಇದ್ದರೆ ಆತ ಸಾಲಗಾರನಾಗುತ್ತಾನೆ. ಆಮೇಲೆ ಸಾಲಕ್ಕೆ ಸಾಲ ಸೇರಿ ಆತ ಸೋಲುತ್ತಾನೆ. ತಾಯಿಯಿಂದ ಮಗುವನ್ನು ಬೇರ್ಪಡಿಸಿದಂತೆ ತನ್ನ ಹೊಲದ ಉತ್ಪಾದನೆ ರೈತರಿಂದ ಬೇರೆಯಾಗುತ್ತದೆ. ನಾನು ಮತ್ತು ನನ್ನ ನೆಲ ಎಂಬ ಆತ್ಮಾಭಿಮಾನ, ಪ್ರೀತಿ ಕಡಿಮೆಯಾಗುತ್ತದೆ. ಭೂಮಿಯ ಮೇಲಿನ ಮಮಕಾರ ಇಲ್ಲವಾಗಿ ಸುಲಭದಲ್ಲಿ ದುಡ್ಡು ಮಾಡುವ ನೆಪದಲ್ಲಿ ಭೂಮಿಯ ನೈಸರ್ಗಿಕ ಚಲನ ಶೀಲತೆಯನ್ನು ಧ್ವಂಸಮಾಡಲು ಮನುಷ್ಯ ಹವಣಿಸುತ್ತಾನೆ. ನಮ್ಮ ಹಿಡುವಳಿ ದಾರರೂ ಹಿಂದುಳಿದದ್ದೂ ಹೀಗೆ, ಹೆಚ್ಚು ಹೆಚ್ಚು ಯಂತ್ರ ಸಾಧನಗಳು, ಮಿಶನರಿ ಸರಂಜಾಮುಗಳನ್ನು ಬಳಸಿಕೊಂಡರೆ ಅವರ ಕೃಷಿ ಉತ್ಪನ್ನದ ಬಹುಪಾಲು ಪೇಟೆಗೆ ಹೋಗಿ ಅಲ್ಲಿರುವ ವ್ಯಾಪಾರಿಗಳ ಕೈ ಸೇರುತ್ತದೆ. ಇವೆಲ್ಲಾ ಕೊರತೆಗಳ ಸಂಕೋಲೆಯಲ್ಲಿ ರೈತ ಬಂದಿಯಾಗುತ್ತಾನೆ. ಶ್ರಮಕ್ಕೆ ಪ್ರಾಧಾನ್ಯತೆ ಸಿಗಬೇಕು. ಆಗ ಮನುಷ್ಯನಿಗೆ ಬೆಲೆ ಬರುತ್ತದೆ. ದುಡಿದುಣ್ಣುವ ಕುಟುಂಬಗಳ ಆದಾಯ ಹೆಚ್ಚುತ್ತದೆ. ಅತಿಯಾದ ಲಾಭಕ್ಕಿಂತಲೂ ಅಲ್ಲಲ್ಲಿಯೇ ತಾವು ಬೆಳೆದುದನ್ನೇ ಬಳಸಿ ಜೀವನ ಸಾಗುತ್ತದೆ. ತಮ್ಮ ಉತ್ಪಾದನೆಯಲ್ಲಿ ಉಪಯೋಗಿಸಿ ಉಳಿದದನ್ನು ಮಾರಿ ಉಳಿತಾಯ ಮಾಡಬಹುದು.ಉದ್ಯೋಗಕ್ಕಾಗಿ ಪರವೂರಿಗೆ ವಲಸೆ ಹೋಗುವ,ನಿರುದ್ಯೋಗಿ ಯಾಗುವ ಎಲ್ಲಾ ಸಮಸ್ಯೆಗಳು ಬಗೆಹರಿಯುತ್ತದೆ. ತಮ್ಮ ಉಳಿತಾಯದಲ್ಲಿ ತಮಗೆ ಅಗತ್ಯವಿರುವ ಪೇಟೆ ಸಾಮಾನುಗಳನ್ನು ಮಿತವಾಗಿ ಖರೀದಿಸಬಹುದು. ಗ್ರಾಮದ ಅಭಿವೃದ್ಧಿಗಾಗಿ ಬಳಸಬಹುದು, ಅಂಗನವಾಡಿ, ಶಾಲೆ, ಕುಡಿಯುವ ನೀರು, ಕಾಡು ಬೆಳೆಸುವಂತ ಕೆಲಸ ಮಾಡಬಹುದು. ಇಂತಹ ಯೋಚನೆ ಗಳಿಂದ ಮಾತ್ರ ನಮ್ಮ ಭೂಮಿಯ ಉದ್ಧಾರ ಸಾಧ್ಯ.

## ರಾಗಿ

ರಾಗಿ ಬಡವರ ಬಂಧು. ರಾಗಿಯನ್ನು ಜನ ತಾತ್ಸಾರ ಮಾಡುವುದುಂಟು, ಅದು ಸರಿ ಅಲ್ಲ, ಅನ್ನ ಉಣ್ಣುವವರು ಮೇಲೆ, ರಾಗಿ ಅಂಬಲಿ ಉಣ್ಣುವವರು ಕೆಳಗಿನವರು ಇಂತಹ ನಂಬಿಕೆ ಇದೆ. ಇದು ಬರೇ ತಪ್ಪು ಕಲ್ಪನೆ.ಬಿಳಿ ಅಕ್ಕಿಗಿಂತ ರಾಗಿಯೇ ಶ್ರೇಷ್ಠ. ಇಂದು ಕರಾವಳಿ ಜಿಲ್ಲೆಯಲ್ಲಿ ರಾಗಿ ಬಳಕೆ ಕಡಿಮೆಯಾಗಿದೆ. ಆದರೆ ಹಿಂದಿನ ತಲೆಮಾರಿನವರೆಗೆ ಜನ ಅದನ್ನೇ ಬಳಸುತ್ತಿದ್ದರು. ನೀರಾವರಿ

ವ್ಯವಸ್ಥೆ ಅಭಿವೃದ್ಧಿ ಆದ್ದೇ ಇದಕ್ಕೆ ಕಾರಣ. ಬರಗಾಲ ಪೀಡಿತ ಪ್ರದೇಶಗಳಲ್ಲಿ ಇಂದೂ ರಾಗಿಯೇ ಪ್ರಧಾನ ಬೆಳೆ. ಮಳೆ ಕಡಿಮೆಯಾದಾಗ, ಭತ್ತ, ಕಬ್ಬು ಬೆಳೆಯಲಾಗದಿದ್ದರೆ ರಾಗಿಯನ್ನೇ ಬೆಳೆಯಬೇಕಷ್ಟೆ. ಎಂತಹ ಗುಡ್ಡಗಳಲ್ಲೂ ಇದು ಬೆಳೆಯಬಲ್ಲುದು. ಕೇವಲ ಬಿತ್ತಿ ಬಿಟ್ಟರೆ ಆಯ್ತು ಕುಮೇರಿ ಬೇಸಾಯಕ್ಕೆ ಇದು ಹೇಳಿದ ಬೆಳೆ. ನಾನು ನನ್ನ ಭತ್ತದ ಕ್ರಮದಂತೆ ಏರಿ ಮಾಡಿಯೂ ರಾಗಿ ಬೆಳೆದಿದ್ದೇನೆ. ತಗ್ಗು ನೀರಾಶ್ರಯದ ಜಾಗ, ಸಮತಟ್ಟಾದ ನೆಲ ಬೇಕೆಂದೇನೂ ಇಲ್ಲ. ಗುಡ್ಡಗಳ ಇಳಿಜಾರಿನಲ್ಲಿ ಹುಲುಸಾಗಿ ಬೆಳೆಯುತ್ತದೆ.'ರಾಗಿ ತಿಂದವನಿಗೆ ರೋಗವಿಲ್ಲ' ಎಂಬ ಮಾತಿದೆ. ನನ್ನ ಚೇರ್ಕಾಡಿ ಬದುಕಿನಲ್ಲಿ ರಾಗಿಯನ್ನು ಹೇರಳ ಬೆಳೆಸಿ ಧಾರಾಳವಾಗಿ ಬಳಸಿದ್ದೇನೆ. ಬಹಳ ದೀರ್ಘಕಾಲದವರೆಗೆ ರಾಗಿಯನ್ನು ಶೇಖರಿಸಿಡಬಹುದು. ಹತ್ತು ವರ್ಷ ಹಳೆಯದಾದ ರಾಗಿ ನನ್ನಲ್ಲಿದೆ. ಬೇಸಿಗೆಯ ಧಗೆಗೆ ರಾಗಿ ಅಂಬಲಿ ಬಹಳ ತಂಪು ಕೊಡುತ್ತದೆ. ಜೀರ್ಣಕ್ರಿಯೆ ಕೂಡಾ ಸುಗಮವಾಗಿರುತ್ತದೆ. ಇದಕ್ಕೆ ಶ್ರಮದ ಅವಶ್ಯಕತೆ ತೀರಾ ಕಡಿಮೆ.

## ಬರಗಾಲ ಗೆಡ್ಡೆ

ಮರಗೆಣಸನ್ನು ಬರಗಾಲ ಗೆಡ್ಡೆ ಎಂಬುದಾಗಿ ನಾನು ಪರಿಗಣಿಸಿದ್ದೇನೆ. ಬರಗಾಲದಲ್ಲಿ ಆಪತ್ಬಾಂಧವನಂತೆ ಈ ಗೆಡ್ಡೆ ಸಹಾಯ ಮಾಡುತ್ತದೆ. ಹೇರಳವಾಗಿ ಬೆಳೆಯಾಗುವ ಈ ಗೆಣಸು ಸಣ್ಣ ಕೃಷಿಕರಿಗೆ ಹೇಳಿ ಮಾಡಿಸಿದ್ದು. ಈ ಆಹಾರವನ್ನು ಬಹಳ ಜನ ದೂರುವುದುಂಟು. ಇದು ಹೆಚ್ಚು ತಿಂದರೆ ಒಳ್ಳೆಯದಲ್ಲವೆಂದು. ಹೆಚ್ಚು ತಿಂದರೆ ಯಾವುದೂ ಒಳ್ಳೆಯದಲ್ಲ. ಆದರೂ ಒಮ್ಮೆ ಪ್ರಯೋಗ ಮಾಡಿ ನೋಡುವ ಕುತೂಹಲವಾಯಿತು. ನಮ್ಮ ಹಿತ್ತಲಲ್ಲಿ ಧಾರಾಳ ಬೆಳೆಯುತ್ತಿದ್ದ ದಿನವದು, ಬರೇ ಮರಗೆಣಸನ್ನೇ ಮೂರು ಹೊತ್ತೂ ತಿನ್ನತೊಡಗಿದೆ. ಹೀಗೇ ಏಳು ದಿನಗಳ ಕಾಲ ಅದನ್ನೇ ತಿಂದೆ. ನನ್ನ ದೇಹಸ್ಥಿತಿಯಾಗಲಿ, ಪಚನ ಕ್ರಿಯೆಯಾಗಲೀ ಸಹಜವಾಗಿಯೇ ಇತ್ತು. ರಾಗಿಯಂತೆ ಮರಗೆಣಸು ಕೂಡಾ ಒಣಭೂಮಿ, ಗುಡ್ಡಗಳ ಇಳಿಜಾರುಗಳಲ್ಲಿ ಬೆಳೆಯುವಂತದ್ದು. ಮಳೆಗಾಲದ ಕೃಷಿಯಾಗಿ ಇದನ್ನು ಬೆಳೆಸುವುದು ಸುಲಭ. ಏರಿಮಾಡಿ ಯಾ ಗುಪ್ಪೆ ಮಾಡಿ ನೆಡಬೇಕು. ಇಳಿಜಾರು ಜಾಗದಲ್ಲಿ ಅಡ್ಡದಂಡೆ ಹಾಕಿ ಬೆಳೆಸಿದರೆ, ನೀರು ಇಂಗಿಕೊಳ್ಳುತ್ತದೆ. ಭೂ ಸವೆತ ನಿಯಂತ್ರಣ ವಾಗುತ್ತದೆ. ಇದು ಬಹಳ ಸರಳ ವಿಧಾನದ ಕೃಷಿ. ಮರಗೆಣಸನ್ನು ಕೆಡದಂತೆ



ಶೇಖರಿಸಿಡಬಹುದು, ಬೇಯಿಸಿ ಒಣಗಿಸಬಹುದು, ಬೇಯಿಸದೆಯೂ ಒಣಗಿಸಬಹುದು.

## 'ನಮ್ಮ ಭೂಮಿ' ಯ ನಂಟು

ಇಂದು ನನ್ನ ದಿನಚರಿಯಲ್ಲಿ ಎರಡು ನೆಲಗಳು ಸೇರಿಕೊಂಡಿವೆ. ಒಂದು ನನ್ನದೇ ಕರ್ಮಭೂಮಿಯಾದ ಚೇರ್ಕಾಡಿಯ ಖಾದಿ ಧಾಮ. ಇನ್ನೊಂದು ಕುಂದಾಪುರದ ಬಳಿ ಇರುವ 'ನಮ್ಮ ಭೂಮಿ'. ಕಳೆದ ಕೆಲವು ವರ್ಷಗಳಿಂದ ಈ ಎರಡೂ ಭೂಮಿಗಳೂ ನನ್ನವುಗಳೇ ಎಂಬಷ್ಟು ಮಮತೆ ಬೆಳೆದುಕೊಂಡಿದೆ. ನಾನು ಮನೆಯಲ್ಲಿದ್ದರೂ ನನ್ನ ಮನಸ್ಸಿನಲ್ಲಿ 'ನಮ್ಮ ಭೂಮಿ'ಯ ಯೋಚನೆ ತುಂಬಿಕೊಳ್ಳುತ್ತದೆ.

ಆಗ ಆದಷ್ಟು ಸಮಯ ಇಲ್ಲಿ ಕಳೆಯುವ ಮನಸ್ಸಾಗುತ್ತದೆ. ಈ ನಂಟು ಬೆಳೆದು ಬಂದಿರುವುದಕ್ಕೆ ಎರಡು ಪ್ರಮುಖ ಕಾರಣಗಳನ್ನು ನಾನು ಗುರುತಿಸುತ್ತೇನೆ. ಒಂದನೆಯದಾಗಿ 'ನಮ್ಮ ಭೂಮಿ' ಯನ್ನು ಮುನ್ನಡೆ ಸುತ್ತಿರುವ ಆಲೋಚನೆಗಳು ನನಗೂ ಪ್ರಿಯವಾದವುಗಳು. ಗಾಂಧಿ ಅಗಲಿ ಹೋದರೂ ಗಾಂಧೀವಾದದ ಸತ್ವಗಳು, ಮಹಾತ್ಮರ ಜನಪರ ವಿಚಾರಧಾರೆ ಇನ್ನೂ ನಮ್ಮ ಭೂಮಿಯಲ್ಲಿ ಹರಿಯುತ್ತಿದೆ. ದೀನ ದಲಿತರ ಬಗ್ಗೆ, ನಿರ್ಗತಿಕರ ಬಗ್ಗೆ ಗತಿ ಕಾಣಿಸುವ, ದಲಿತರನ್ನು ಬಲಿತರನ್ನಾಗಿಸುವ ಅಧಿಕಾರ ವಿಕೇಂದ್ರೀಕರಿಸಿ, ಗ್ರಾಮ ಸ್ವರಾಜ್ಯದ ಕನಸನ್ನು ನನಸಾಗಿಸುವ ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸುವ ಪ್ರಾಮಾಣಿಕ ಪ್ರಯತ್ನ ನಡೆಯುತ್ತಿದೆ.

'ನಮ್ಮ ಭೂಮಿ' ಕೇವಲ ದಾಖಲೆ ಪತ್ರಗಳಲ್ಲಿ ಹಾಗೆ ನಮೂದಿ ಸಲ್ಪಟ್ಟಿರುವುದಕ್ಕಾಗಿ ಹಾಗೆ ಕರೆಯಲ್ಪಡುತ್ತಿಲ್ಲ, ಬದಲಿಗೆ ನಾವೆಲ್ಲಾ ಕೆಲಸ ಮಾಡಿ, ನಮ್ಮ ಪರಿಶ್ರಮದಿಂದ ಅದನ್ನು ರೂಪಿಸಿಕೊಂಡಿದ್ದೇವೆ. ಮಕ್ಕಳು ಹಿರಿಯರು ಸೇರಿ ದುಡಿಯುತ್ತಾರೆ. ತಮ್ಮ ತಮ್ಮ ಅನುಭವಗಳ ಕಾರಣ ವಾಗಿಯೇ ಇದು 'ನಮ್ಮದು' ಎಂಬ ಭಾವನೆ ಮೂಡುತ್ತದೆ. ಇಂತಹ ಕಾರಣಗಳಿಗಾಗಿ ನಾನೂ ಕೂಡಾ ಈ ಪೈಕಿ ಒಬ್ಬ ಎಂಬುದಾಗಿ ಗುರುತಿಸಿ ಕೊಂಡಿದ್ದೇನೆ.

ಎರಡನೆಯದಾಗಿ, ಈ ಎಲ್ಲಾ ಆಲೋಚನೆಗಳ ಹಿಂದಿರುವ ನಂದನಾ, ದಾಮು ಹಾಗೂ ಅವರನ್ನು ಸದಾ ಪ್ರೇರೇಪಿಸುತ್ತಿರುವ ಶ್ರೀ ಪಟ್ಟಾಭಿರಾಮ ರೆಡ್ಡಿಯವರು. ಅವರ ಹಿಂದೆ ದೊಡ್ಡ ಸೈನ್ಯವೇ ಇದೆ. ಅವರ ಪ್ರೇರಕ ಶಕ್ತಿಗಳಾಗಿ ಶೋಷಿತ ಮಕ್ಕಳ ಸಾಗರವೇ ಅವರೊಂದಿಗಿದೆ. ಇವೆಲ್ಲವೂ ಗಾಂಧಿ ಕಂಡ ಕನಸನ್ನು ನನಸು ಮಾಡುವ ನಿರಂತರ ಹೋರಾಟಕ್ಕೆ ಪೂರಕವಾಗಿದ್ದು, ನಿಜ ರಾಮರಾಜ್ಯದತ್ತ ಸಾಗುತ್ತಿದ್ದಾರೆ. ನಾನಾದರೋ ಒಬ್ಬ ವ್ಯಕ್ತಿಯಾಗಿ ಪರಿಪೂರ್ಣನಾಗಲು ಬಯಸಿದವ. 'ನಮ್ಮ ಭೂಮಿ'ಯಲ್ಲಿ ನನ್ನ ಕನಸುಗಳೂ ಜೀವ ಪಡೆದು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಅಭಿವೃದ್ಧಿಯ ಕಡೆಗೆ ಸಾಗುತ್ತಿವೆ. ಇವುಗಳನ್ನು ಕಾಣುವುದೇ ನನಗೆ ಅತ್ಯಂತ ಸಂತಸದ ವಿಚಾರವಾಗಿದೆ. ಇದರ ದೊಡ್ಡ ಹೋರಾಟದಲ್ಲಿ ನಾನು ಪಾಲ್ಗೊಳ್ಳಲು ಸಂತಸ ಪಡುತ್ತಿದ್ದೇನೆ. ನಾನು ಒಮ್ಮೊಮ್ಮೆ ಯೋಚಿಸಿರುವುದುಂಟು. ಹೇಗೂ ಖಾದಿ ಧಾಮವನ್ನು ನನ್ನ ಮಗ ಆನಂದ, ಸೊಸೆ ವೀಣಾ ಚೆನ್ನಾಗಿ ನೋಡಿಕೊಳ್ಳು ತ್ತಿದ್ದಾರೆ. ನಮ್ಮ ಕುಟುಂಬ ಸ್ವಾವಲಂಬಿಯಾಗಿದೆ. ಅವರಿಗೇನೂ ಚಿಂತೆ ಇಲ್ಲ.

ನನ್ನ ಇನ್ನುಳಿದ ಜೀವಮಾನವನ್ನು 'ನಮ್ಮ ಭೂಮಿ'ಯಲ್ಲೇ ಇದ್ದು ಕಳೆಯುವ ಇಚ್ಛೆಯಾಗುತ್ತದೆ.

ನನ್ನ ಬಾಲ್ಯವನ್ನು ನೆನಪಿಸಿಕೊಂಡರೆ, ಉಡುವ ಬಟ್ಟೆ, ಉಣ್ಣುವ ಅನ್ನ, ವಾಸಕ್ಕೊಂದು ನೆಲೆಗಾಗಿ ನಡೆಸಿದ ಹೋರಾಟ ನನ್ನದು. ಇದೆಲ್ಲಾ ಎಲ್ಲರ ಅವಶ್ಯಕತೆಯೂ ಹೌದು. ನಾನು ನನ್ನ ಪ್ರಯತ್ನದಲ್ಲಿ ಸಫಲ ನಾಗಿದ್ದೇನೆ, ನನ್ನ ಆ ಕಾಲದಲ್ಲಿ 'ನಮ್ಮ ಭೂಮಿ'ಯಂತದ್ದು ಇದ್ದಿರಲಿಲ್ಲ. ಆದರೆ ಈಗ ಇದೆ. ಇಂತಹ ಮಾದರಿಯನ್ನು ಬೇರೆಯವರು ಗುರುತಿಸಿ ಪಾಲಿಸಿದರೆ ಸಮಾಜಕ್ಕೆ ಒಳ್ಳೆಯದಾಗುತ್ತದೆ. 'ನಮ್ಮ ಭೂಮಿ'ಯಲ್ಲಿ ನೂರಾರು ಮುಗ್ಧ ಜೀವಿಗಳಿದ್ದಾರೆ. ಇಂತಹ ಲಕ್ಷ ಲಕ್ಷ ಮಕ್ಕಳು ಜಗತ್ತಿನಲ್ಲಿದ್ದಾರೆ. ಇವರೆಲ್ಲರ ಒಳಿತಿಗಾಗಿ ಸಿ.ಡಬ್ಲ್ಯೂ.ಸಿ. ಸಂಸ್ಥೆ ದೊಡ್ಡ ಹೋರಾಟ ನಡೆಸುತ್ತಿದೆ. ಮಕ್ಕಳ ಸಂಸ್ಥೆ ಇದು. ಇಲ್ಲಿ ಮಕ್ಕಳ ಆಶೋತ್ತರಗಳಿಗೇ ಪ್ರಥಮ ಆಧ್ಯತೆ.

ಗಾಂಧೀಜಿಯವರು ಹೇಳಿದ್ದ ಹಾಗೆ, ಗ್ರಾಮೀಣ ಕಸುಬುಗಳ ಪುನರುತ್ಥಾನಕ್ಕಾಗಿ ಸಿ.ಡಬ್ಲ್ಯೂ.ಸಿ.ಯ ಗ್ರಾಮಶ್ರಮ (ಗ್ರಾಮೀಣ ಶ್ರಮಿಕ ಮಕ್ಕಳ ಸಂಸ್ಥೆ) ನಮ್ಮ ಭೂಮಿಯ ತರಬೇತು ಕೇಂದ್ರವನ್ನು ಸೃಷ್ಟಿಸಿದೆ. ಇಲ್ಲಿ ಹಳ್ಳಿಯ ಕಸುಬುಗಳಾದ ನೂಲುವುದು, ಕೈಮಗ್ಗದಿಂದ ನೇಯುವುದು, ತಾವೇ ಬಟ್ಟೆ ತಯಾರಿಸಿ ಹೊಲಿಯುವುದು, ಮತ್ತೆ ಮರಗೆಲಸ, ಮಡಕೆ ಕಸುಬು, ಕೃಷಿ, ಬಡವರ ವಾಹನ ಸೈಕಲ್ಲು ರಿಪೇರಿ, ಬಡವರ ಸೊತ್ತುಗಳಾಗಿರುವ ಸ್ಟೌ, ಗ್ಯಾಸ್ ಲೈಟು ರಿಪೇರಿ, ಕಡಿಮೆ ಖರ್ಚಿನಲ್ಲಿ ಮತ್ತು ಸ್ಥಳೀಯ ಕಚ್ಚಾವಸ್ತು ಬಳಸಿ ಕಟ್ಟಡ ನಿರ್ಮಾಣ ಹೀಗೆ ಅನೇಕ ತರಬೇತಿ ನಡೆಸುತ್ತಿದೆ. ಶಾಲೆಗೆ ಹೋಗಲಾಗದ, ಹೋಗಿಯೂ ಓದು ಮುಂದುವರಿಸಲಾಗದ ಹಳ್ಳಿಯ ಮಕ್ಕಳಿಗಾಗಿ ಇರುವ 'ನಮ್ಮ ಭೂಮಿ' ಎಂಬ ಈ ಸಂಸ್ಥೆಯೊಂದಿಗೆ ಸೇರಿ ದುಡಿಯುವುದು ಇಂದು ನನಗೆ ಬಹಳ ಖುಷಿಕೊಡುತ್ತಿದೆ. ಒಂದು ಕಾಲದಲ್ಲಿ ನಾನೂ ಈ ಮಕ್ಕಳ ಹಾಗೇ ನಿರ್ಗತಿಕನಾಗಿದ್ದೆ. ಸ್ವಂತ ಕಾಲ ಮೇಲೆ ನಿಲ್ಲುವುದಕ್ಕಾಗಿ ಕಷ್ಟಪಡುತ್ತಿದ್ದೆ. ಅವರಿವರ ಸಹಾಯ ಅನುಕಂಪಕ್ಕಾಗಿ ಹಾತೊರೆಯುತ್ತಿದ್ದೆ. ಇದೆಲ್ಲಾ ನೆನಪಾಗುವಾಗ ನಮ್ಮ ಸಂಸ್ಥೆ ಎಷ್ಟೊಂದು ಒಳ್ಳೆಯ ಕೆಲಸ ಮಾಡುತ್ತಿದೆಯಲ್ಲಾ ಎಂದೆನಿಸುತ್ತದೆ. ಇಂತಹ ವ್ಯಕ್ತಿಗಳು ಹಾಗೂ ಇಂತಹ ಸಂಸ್ಥೆಗಳು ನಮ್ಮ ದೇಶದ ಎಲ್ಲಾ ಕಡೆ ಇದ್ದರೆ ನಮ್ಮ ದೇಶದ ಮಕ್ಕಳಿಗೆ ಸೂಕ್ತವಾದ ಸಮಾಜ ನಿರ್ಮಿಸಿದಂತಾಗುತ್ತದೆ.

ನಾನು ಮಗುವಾಗಿದ್ದಾಗ ಇಂತಹ ಸಂಸ್ಥೆಯೊಂದಿರುತ್ತಿದ್ದರೆ ...ಅನಿಸುತ್ತದೆ!

'ನಮ್ಮ ಭೂಮಿ'ಯೊಂದಿಗೆ ನನ್ನ ನಂಟು ಆರಂಭವಾದದ್ದು ನನಗೆ ಅನಿರೀಕ್ಷಿತ. ಆ ಹೊತ್ತಿಗೆ ಇಂತಹ ಒಂದು ಸಂಸ್ಥೆ ಇದ್ದದ್ದೇ ನನಗೆ ಗೊತ್ತಿರಲಿಲ್ಲ. ಒಂದು ದಿನ ದಾಮೋದರ ಆಚಾರ್ಯರು, ಗಣಪತಿ ಮೊದಲಾದವರು ನಮ್ಮಲ್ಲಿಗೆ ಬಂದರು. ತೋಟ ನೋಡುವ ಉತ್ಸಾಹದಿಂದ ಬಂದ ಅವರಿಗೆ ನನ್ನ ಕೃಷಿ ತೋಟ ತೋರಿಸಿದೆ. ಅವರೂ ಬಹಳ ಖುಷಿ ಪಟ್ಟರು. ನಮ್ಮಲ್ಲಿ ಬಹಳ ದೀರ್ಘ ವಿಚಾರ ವಿನಿಮಯವಾದಾಗ ಇವರ ಯೋಚನೆ, ವಿಚಾರಗಳು ನನಗೂ ಹಿಡಿಸಿದವು. ಸಣ್ಣ ಹಿಡುವಳಿದಾರರಿಗೆ ಸೂಕ್ತ ಮಾರ್ಗದರ್ಶನ ಬಯಸಿದ್ದ ಇವರು ಬ್ರಹ್ಮಾವರದ ಕೃಷಿ ಸಂಶೋಧನಾ ಕೇಂದ್ರವನ್ನು ಸಂಪರ್ಕಿಸಿದ್ದಾಗ ಅವರೇ ನನ್ನ ಕಡೆ ದಾರಿ ತೋರಿಸಿದ್ದರಂತೆ. ಗ್ರಾಮಶ್ರಮ ಹಮ್ಮಿಕೊಂಡಿದ್ದ ಆಗಿನ ಕಾರ್ಯಕ್ರಮ ಗಳನ್ನು ತಿಳಿದು ಇವರೂ ನನ್ನ ಪೈಕಿಯವರು ಎಂದು ಗ್ರಹಿಸಿಕೊಂಡೆ. ನಿಮ್ಮ ಸಂಸ್ಥೆಯ ಕಾರ್ಯಕ್ರಮಗಳಿಗೆ ನಾನೂ ಸಹಕರಿಸುವುದಾಗಿ ಹೇಳಿದೆ. ನನ್ನ ಕೃಷಿ ವಿಚಾರಗಳ ಬಗ್ಗೆ ಆರಂಭದಲ್ಲಿ ಪ್ರಚಾರ ಪ್ರೋತ್ಸಾಹ ನೀಡಿದವರು ಮಣಿಪಾಲದ ಟಿ. ಎಂ. ಎ. ಪೈ ಬಳಗದವರು, ಸುಮಾರು ೧೯೬೫ ರಿಂದ ೮೫ರ ವರೆಗೆ ಇವರ ಕಡೆಯಿಂದ ಆಗಾಗ ಜನ ಬಂದು ಹೋಗುತ್ತಿದ್ದರು. ಬಳಿಕ ಹಸಿರುಕ್ರಾಂತಿಯ ಬಿರುಗಾಳಿಯಲ್ಲಿ ಎಲ್ಲವೂ ಯಂತ್ರಮಯ ವಾಗತೊಡಗಿತು. ಆಮೇಲೆ ಸುಮಾರು ೧೯೯೧ನೇ ಇಸವಿಯಲ್ಲಿ 'ನಮ್ಮ ಭೂಮಿ'ಯವರು ನಮ್ಮಲ್ಲಿಗೆ ಬರುವವರೆಗೆ ನಾನು ತುಸು ಅಜ್ಞಾತವಾಗಿದ್ದೆ. ನನ್ನ ವಿಚಾರಗಳನ್ನು ಒಪ್ಪುವ ಮತ್ತು ಪ್ರೋತ್ಸಾಹಿಸುವ ಜನ ಬಹಳ ಕಡಿಮೆ ಇದ್ದರು. ನಮ್ಮಲ್ಲಿಗೆ ಬರುವವರಲ್ಲಿ ಹೆಚ್ಚಿನವರು ಬರೇ ಕುತೂಹಲಕ್ಕಾಗಿ ಬರುವವರು. ಪ್ರಾಮಾಣಿಕವಾಗಿ ತಿಳಿದುಕೊಳ್ಳುವವರು, ತಮ್ಮ ಅನುಕೂಲ ಕ್ಕಾಗಿ ಅನುಸರಿಸುವವರು ತೀರಾ ವಿರಳ. ಸಿಂಡಿಕೇಟ್ ಪ್ರತಿಷ್ಠಾನದವರು ಒಂದಷ್ಟು ಪ್ರಚಾರ ಕೊಟ್ಟಿದ್ದಾರೆ. ಆದರೆ ಅದು ನಿಜವಾಗಿ ತಲುಪ ಬೇಕಾದವರಿಗೆ ತಲುಪುವಲ್ಲಿ ಯಶಸ್ವಿಯಾಗಲಿಲ್ಲ. ಇಂದು ಕೇವಲ ಪ್ರಚಾರ ಏನನ್ನೂ ಕೊಡುವುದಿಲ್ಲ. ಅವುಗಳ ಅನುಸರಣಿಕೆ ಅಗತ್ಯ. ನಮ್ಮ ನಿಜ ಜನತೆಗೆ ಅರಿವು ಮೂಡಿಸುವ ಅಗತ್ಯವಿದೆ. ಇಂತಹ ಕೆಲಸವನ್ನು ಗ್ರಾಮಶ್ರಮ ಮಾಡುತ್ತಿದೆ. ಜನರು ಭಾಗವಹಿಸುವಂತೆ ಮಾಡುತ್ತಿದೆ. ಒಬ್ಬ ಗಾಂಧಿವಾದಿಯ ಬದಲಿಗೆ ಸಾವಿರಾರು ಗಾಂಧಿವಾದಿಗಳು

ಹುಟ್ಟಿಕೊಳ್ಳುತ್ತಿದ್ದಾರೆ. ನನ್ನ ಇಳಿವಯಸ್ಸಿನಲ್ಲಿ ಇಂತಹ ಒಂದು ಬಳಗದ ಸಹಯೋಗ ದೊರೆತಿರುವುದು ನನ್ನ ಭಾಗ್ಯವೆಂದು ಪರಿಗಣಿಸಿದ್ದೇನೆ. ನನ್ನ ಅಖ್ಯೆರಿ ಕಾಲಕ್ಕೆ'ನಮ್ಮ ಭೂಮಿ' ಕುಟುಂಬ ನನಗೆ ಸಿಕ್ಕಿದೆ. ಅಲ್ಲಿಯ ಮಕ್ಕಳು ನನ್ನಲ್ಲಿ ಅಭಿಮಾನ ಹುಟ್ಟಿಸಿದ್ದಾರೆ. ನನ್ನ ಕನಸುಗಳು ನನ್ನಲ್ಲೇ ಸತ್ತು ಹೋಗುತ್ತವೆಯೆಂಬ ಭಯವಿತ್ತು. ಆದರೆ 'ನಮ್ಮ ಭೂಮಿ' ಕಂಡ ಮೇಲೆ ಮುಂದೆಯಾದರೂ ಒಳ್ಳೆಯ ಭವಿಷ್ಯವಿದೆ ಎಂಬ ನಂಬಿಕೆ ಬಂದಿದೆ.

## 'ನಮ್ಮ ಭೂಮಿ' ಪ್ರಯೋಗಗಳು

೧೯೯೧ರ ಹೊತ್ತಿಗೆ ನನಗೆ ಗ್ರಾಮಾಶ್ರಮದ ಪರಿಚಯವಾಗಿ ಆಗಾಗ ನನ್ನನ್ನು ಅವರು ಕರೆಸುತ್ತಿದ್ದರು. ದುಡಿಯುವ ಕಂದಮ್ಮಗಳು, ಅವರ ಸಮುದಾಯದ ರೈತರು, ದುಡಿಯುವ ಮಹಿಳೆಯ ಜೊತೆ ನನ್ನ ಒಡನಾಟ ಆರಂಭವಾಯಿತು. ವಿಶೇಷ ಕಾರ್ಯಕ್ರಮವಿದ್ದಾಗ ತಪ್ಪದೇ ಹಾಜರಾಗುತ್ತಿದ್ದೆ. ಕ್ರಮೇಣ 'ನಮ್ಮ ಭೂಮಿ'ಯ ತರಬೇತು ಕಾರ್ಯಕ್ರಮಗಳು ಬಿರುಸಿನಿಂದ ಸಾಗತೊಡಗಿತು. ನಿವಾಸಿ ಮಕ್ಕಳೆಲ್ಲರೂ ಬೆಳಿಗ್ಗೆ ಎದ್ದ ಬಳಿಕ ಕಡ್ಡಾಯವಾಗಿ ಕೃಷಿ ಚಟುವಟಿಕೆಯಲ್ಲಿ ಭಾಗವಹಿಸತೊಡಗಿದರು. ಮಕ್ಕಳಿಗೆ ಮುಂದೆ ಉಪಯೋಗಕ್ಕೆ ಬರಬಹುದಾದ ಎಲ್ಲಾ ರೀತಿಯ ಕೃಷಿ ವಿಚಾರಗಳನ್ನು ಕರಗತ ಮಾಡಿಸಲಾಗುತ್ತಿತ್ತು. ಮಳೆಗಾಲದ ಕೃಷಿಯೇ ಮುಖ್ಯವಾಗಿತ್ತು. ಭತ್ತ ಬೆಳೆಸುವುದು, ತರಕಾರಿ, ಮಲ್ಲಿಗೆ, ಬಾಳೆ, ಅಲ್ಲದೇ ಮರ ಬೆಳೆಸುವ ಮಾಹಿತಿ ನೀಡುವುದರೊಂದಿಗೆ ಸ್ವತಃ ತೊಡಗಿಕೊಳ್ಳುವಂತೆ ಮಾಡಲಾಗುತ್ತಿದೆ.

ಚೇರ್ಕಾಡಿಯ ನನ್ನ ವಿಧಾನದಲ್ಲಿ ಬೆಳೆಸಲಾಗುವ ಭತ್ತವು ಉತ್ಕೃಷ್ಟ ಫಸಲು ನೀಡುತ್ತಿದೆ. ನಾನು ಆಗಾಗ ಹೋಗಿ ಅಲ್ಲಿಯೇ ಉಳಿದುಕೊಂಡು ಕೃಷಿ ವಿಚಾರ ಹೇಳುತ್ತಿದ್ದೇನೆ. ಜ್ಯೊಸರು ಆ ವಿಚಾರಗಳನ್ನು ಕಾರ್ಯಗತ ಮಾಡಿಸುತ್ತಾರೆ. ಭತ್ತ ಮಾತ್ರವಲ್ಲದೇ, ರಾಗಿಯನ್ನೂ ಏರಿ ವಿಧಾನದಲ್ಲಿ ಬೆಳೆಸಿದ್ದೇವೆ. ಒಳ್ಳೆಯ ಬೆಳೆಕೊಟ್ಟಿದೆ. ಬೆಂಡೆ, ಬದನೆ, ಕುಂಬಳ, ಸೌತೆ, ಅಲಸಂಡೆ ಮೊದಲಾದ ತರಕಾರಿಗಳನ್ನು ಬೆಳೆಸುತ್ತೇವೆ. ಬಸಲೆ, ತೊಂಡೆ ಬಾರೀ ಪ್ರಮಾಣದಲ್ಲಿ ಬೆಳೆದಿವೆ. ತೆಂಗು, ಬಾಳೆ, ಶುಂಠಿ, ಅರಿಶಿನ, ಮಲ್ಲಿಗೆ, ಗೇರು, ಜೋಳ ಮೊದಲಾದವುಗಳನ್ನು ಬೆಳೆಸಲಾಗಿದೆ. ಗೆಣಸು, ಮರಗೆಣಸು, ಹರಿವೆ, ಸಾಂಬ್ರಾಣಿ ಬಹಳ ಚೆನ್ನಾಗಿ ಬೆಳೆದಿದೆ. ಮಾವು, ಹಲಸು, ಹೆಬ್ಬಲಸು ಅಲ್ಲದೇ ಅನೇಕ ಕಾಡು ಮರಗಳನ್ನು ನೆಟ್ಟು, ಬೆಳೆಸಲಾಗಿ, ಒಮ್ಮೆ ಬರೇ

ಬೋಳು ಗುಡ್ಡವಾಗಿದ್ದು, ಕರಡದ ಹೊರತು ಬೇರೇನೂ ಬೆಳೆಯದಿದ್ದ ಭೂಮಿ ಇಂದು ತೋಟವಾಗಿಯೂ, ವನವಾಗಿಯೂ ಕಂಗೊಳಿಸುವಂತಾಗಿದೆ. ಪೇರಳೆ, ಚಿಕ್ಕು, ಜೀವಿ ಹಲಸು, ಕರಿಮೆಣಸು ಕೂಡಾ ಹುಲುಸಾಗಿ ಬೆಳೆದಿದೆ. ಈ ಎಲ್ಲಾ ಬೆಳವಣಿಗೆಯಲ್ಲಿ ಮಕ್ಕಳು ಸಕ್ರಿಯವಾಗಿ ಭಾಗವಹಿಸಿ ವಿಶಿಷ್ಟ ಅನುಭವಗಳಿಸುತ್ತಿದ್ದಾರೆ. ನನ್ನ ಕೃಷಿ ಅನುಭವಗಳನ್ನು 'ನಮ್ಮ ಭೂಮಿ'ಯ ಮಕ್ಕಳಿಗೆ ಧಾರೆ ಎರೆಯಲು ಬಹಳ ಖುಷಿಪಡುತ್ತಿದ್ದೇನೆ. ಇಂತಹ ಒಂದು ತರಬೇತು ಸಂಸ್ಥೆ ಇರುವುದೇ ನಮ್ಮ ಜಿಲ್ಲೆಯ ಪುಣ್ಯ ಎಂದು ಬಗೆದಿದ್ದೇನೆ.

## ಪ್ರಜಾಪ್ರಭುತ್ವ ಮಾದರಿಯ ಸಂಬಂಧ

ಮನುಷ್ಯ ಮನುಷ್ಯರ ನಡುವಿನ ಸಂಬಂಧವು ಪ್ರಜಾಪ್ರಭುತ್ವ ರೀತಿಯಲ್ಲಿ ಇರಬೇಕು. ಈ ಕ್ರಮವನ್ನು ದುಡಿಯುವ ಮತ್ತು ದುಡಿಸುವವರು ಪಾಲಿಸಬೇಕು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನೌಕರಿ ಕೆಲಸದಲ್ಲಿ ಹೇಗೆ ವರ್ತಿಸುವುದು? ಪ್ರತಿಯೊಬ್ಬನಿಗೂ ಸ್ವಾಭಿಮಾನದ ಉತ್ಕಟತೆ ಇರುತ್ತದೆ. ಯಾವುದೇ ರೀತಿಯಲ್ಲೂ ಆತನ ಸ್ವಾಭಿಮಾನಕ್ಕೆ ಭಂಗ ಬರಬಾರದು. ಯಾಕೆಂದರೆ ಮಾನವ ಜನ್ಮತಃ ಸ್ವಾತಂತ್ರ್ಯ ಬಯಸುವವನು. ಯಾವುದೇ ಬಂಧನವಿಲ್ಲದೇ ಇರಲು ಬಯಸುತ್ತಾನೆ. ಅದೇನಿದ್ದರೂ ಹೊಟ್ಟೆಯ ಹಸಿವನ್ನು ಇಂಗಿಸಲು ಯಾವುದಾದರೂ ನೌಕರಿಗೆ ಸೇರುತ್ತಾರೆ. ಆವಾಗ ಅಲ್ಲಿ ಆ ಅಧಿಕಾರಿವರ್ಗದಿಂದ ತೊಂದರೆ ಅನುಭವಿಸಬೇಕಾಗುತ್ತದೆ. ಅದು ಹಿಂಸೆ ಆಗುತ್ತದೆ. ಅದಕ್ಕಾಗಿ ನಾವದರಲ್ಲಿ ತಾಳ್ಮೆ ಬೆಳೆಸಿಕೊಳ್ಳಬೇಕು. ಎರಡನೆಯದಾಗಿ ಯಜಮಾನರೆಂದೆನಿಸಿಕೊಳ್ಳುವವರು ಹೆಚ್ಚಿನ ಸಹನೆ ಹೊಂದಿರಬೇಕು. ಯಾವತ್ತೂ ಸಿಟ್ಟಾಗಬಾರದು. ಇದೇ ರೀತಿ ಇಬ್ಬರಲ್ಲೂ ತಾಳ್ಮೆ ಇದ್ದರೆ, ಇಬ್ಬರಿಗೂ ಯಾವ ಬಾಧಕವೂ ಇರುವುದಿಲ್ಲ. ಈ ಇಬ್ಬರ ನಡುವೆ ತಂದೆ ಮಕ್ಕಳ ಸಂಬಂಧವೇರ್ಪಡಬೇಕು. ತಂದೆ ಎನಿಸಿಕೊಂಡವರು ಮಕ್ಕಳನ್ನು ಕೊಂಡಾಟದಿಂದ ದುಡಿಸಿಕೊಳ್ಳಬೇಕು. ಆಗ ಮಕ್ಕಳಲ್ಲೂ ಪ್ರೀತಿ ಬಂದು ಅವರು ಕೂಡಾ ಅಡ್ಡದಾರಿಗೆ ಹೋಗದೇ ಉತ್ತಮ ದುಡಿಮೆ ಮಾಡಬಲ್ಲರು. ಹಾಗಾಗಿ ಈ ಎರಡೂ ವರ್ಗದಲ್ಲಿ ಒಂದು ರೀತಿಯ ಆತ್ಮಾಭಿಮಾನ ಬೆಸೆದುಕೊಳ್ಳುತ್ತಿದೆ. ಅಲ್ಲಿ ಯಾವುದೇ ಹಿಂಸಾವೃತ್ತಿ ಬೆಳೆಯುವುದಿಲ್ಲ. ಸ್ವಾತಂತ್ರದ ಎರಡು ಅಂಶಗಳೆಂದರೆ ನನ್ನಿಂದ ಇನ್ನೊಬ್ಬರಿಗೆ ಎಳ್ಳಿನಷ್ಟು ಹಿಂಸೆ ಆಗಬಾರದು ಎಂಬುದಾಗಿ ಮಹಾತ್ಮಾ ಗಾಂಧಿ ಹೇಳಿದ್ದರು. ನೌಕರರನ್ನು ದುಡಿಸಿಕೊಳ್ಳುವಾಗ ಎಷ್ಟೋ ಪ್ರಸಂಗದಲ್ಲಿ

ತಪ್ಪುಗಳು ಘಟಿಸುತ್ತವೆ. ಇಬ್ಬರಲ್ಲೂ ವೈಮನಸ್ಸು ಉಂಟಾಗಿ, ಮನುಷ್ಯತ್ವ ಹೋಗಿ ಪಶುತ್ವ ಉಂಟಾಗುತ್ತದೆ. ಇದರಿಂದಾಗಿ ನೆಮ್ಮದಿ ಕೆಟ್ಟು ಹೋಗುತ್ತದೆ. ಪ್ರತಿಯೊಬ್ಬನಲ್ಲಿಯೂ ಒಳಗಿನಿಂದ ಒಬ್ಬ ಭೂರಿಬ್ರಾಹ್ಮಣ ಇದ್ದಾನೆ. ಅವನ ಕೆಲಸ ಏನೆಂದರೆ ಎರಡೂ ಕೈ ಮುಂದೆ ಚಾಚಿ ಬೇಡುವುದು. ಇತರರಿಂದ ಪ್ರೀತಿ ಗೌರವ ಹೊಗಳಿಕೆಯನ್ನು ಸದಾ ಯಾಚಿಸುವುದು. ಆತನಿಗೆ ತಾನು ಬಯಸಿದ್ದು ದೊರೆತರೆ ಸಂತೋಷಪಡುತ್ತಾನೆ. ಇಲ್ಲವಾದರೆ ಆತನ ಮನಸ್ಸಿನಲ್ಲಿ ಹಾಹಾಕಾರ ಉದ್ಭವಿಸುತ್ತದೆ. ಒಂದು ಸಣ್ಣ ಉದಾಹರಣೆ ಒಂದು ಸಣ್ಣ ಮಗುವನ್ನು ಮಾತಾಡಿಸುವಾಗ 'ನೀನು ಜಾಣ ಮರಿ' ಎಂದರೆ ಆ ಮಗುವಿನ ಮುಖ ಸಂತಸದಿಂದ ಅರಳುತ್ತದೆ. ಅದೇ ರೀತಿ ಮನುಷ್ಯ ವ್ಯವಹರಿಸುವಾಗ ಈ ಗುಣಗಳನ್ನು ಆಚರಣೆಗೆ ತಂದರೆ ಎಂತಹ ಮನುಷ್ಯನನ್ನಾದರೂ ಪರಿವರ್ತಿಸುವುದು ಸಾಧ್ಯ. ಇಂತಹ ಸನ್ನಿವೇಶಗಳನ್ನು ಒಂದು ಕುಟುಂಬದೊಳಗೆ ಯಾ ಒಂದು ಆಫೀಸಿನೊಳಗೆ ನಾವು ಗುರುತಿಸಬಹುದು. ನಮ್ಮ ವ್ಯಾವಹಾರಿಕ ಜೀವನದಲ್ಲಿ ಇನ್ನೊಬ್ಬರನ್ನು ಗುರುತಿಸುವ ಮತ್ತು ಗೌರವಿಸುವ ಗುಣಗಳನ್ನು ರೂಢಿಸಿಕೊಂಡಲ್ಲಿ ಬದುಕು ಹರುಷದಾಯಕವಾಗುತ್ತದೆ. ಸಮಾಜ ಸುಖಿ ಎಲ್ಲರಿಗೂ ದೊರೆತು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರತಿಯೊಬ್ಬನೂ ಪ್ರಭುವಾಗಲು ಸಾಧ್ಯ.

| ಸಿ.ಡಬ್ಲ್ಯೂ.ಸಿ.ಯ ಮಕ್ಕಳ ಪ್ರಕಟಣೆಗಳ ವಿವರ: | | ಬೆಲೆ |
|---|---|---|
| ಪುಟಕ್ಕೊಂದು ಕಥೆ (ಸಂಪುಟ -I) | ...... | ರೂ. 20-00 |
| ಪುಟಕ್ಕೊಂದು ಕಥೆ (ಸಂಪುಟ -II) | ...... | ರೂ. 25-00 |
| ನಮ್ಮ ಹೊಳೆಯಮ್ಮ (ಕನ್ನಡ/ ಇಂಗ್ಲೀಷ್) | ...... | ರೂ. 15-00 |
| ಮಂಜನ ಸುಂಕದ ಕಟ್ಟೆ | ...... | ರೂ. 10-00 |
| ವರಾಹಿಯೊಂದಿಗೆ ಸಂಭಾಷಣೆ | ...... | ರೂ. 60-00 |
| ವಿಚಾರಣಾ ಸಮಿತಿಯ ವರದಿ - ಮೀನಂಪಟ್ಟಿ | ...... | ರೂ. 10-00 |
| ಮಕ್ಕಳ ಹಕ್ಕುಗಳು -(ಭಿತ್ತಿ ಪತ್ರಗಳು) | ...... | ರೂ. 25-00 |
| ಭೀಮ ಪತ್ರಿಕೆ - ಗೋಡೆ ಪತ್ರಿಕೆ(ಮಾಸ ಪ್ರಕಟನೆ)...... | | ರೂ. 10-00 |
| ನಿಮ್ಮ ಆರೋಗ್ಯ ನಿಮ್ಮ ಕೈಯಲ್ಲಿ | ...... | ರೂ. 40-00 |
| ಮಕ್ಕಳಿಗಾಗಿ ವಿಜ್ಞಾನ | ...... | ರೂ. 40-00 |
| ಹೋರಾಟದ ಹಾದಿಯಲ್ಲಿ ಭೀಮಸಂಘ (ಸಂಪುಟ -1) | | ರೂ. 40-00 |
| ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು (ಸಂಪುಟ -1) | | ರೂ. 40-00 |
| ಕಾಮಾಕ್ಷಿ ಮತ್ತು ರಾಜನ ಕಥೆ | ...... | ರೂ. 15-00 |
| ಹಕ್ಕಿ ಮತ್ತು ಪಂಜರ | ...... | ರೂ. 15-00 |
| ನಮ್ಮ ಸಮೀಕ್ಷೆಯ ಕಥೆ (ಕನ್ನಡ/ ಇಂಗ್ಲೀಷ್) | ...... | ರೂ. 40-00 |
| ನಮಗೆ ಯಾವ ಕೆಲಸ ಸಾಧ್ಯ ಮತ್ತು ಯಾವ ಕೆಲಸ ಸಾಧ್ಯವಿಲ್ಲ(ಕನ್ನಡ/ ಇಂಗ್ಲೀಷ್) | ...... | ರೂ. 40-00 |

# ಚೇರ್ಕಾಡಿ ರಾಮಚಂದ್ರರಾಯರು

# ಬದುಕು ಮತ್ತು ವಿಚಾರ



ಶ್ರೀ ಚೇರ್ಕಾಡಿ ರಾಮಚಂದ್ರರಾಯರು ತಮ್ಮ ಅಮೂಲ್ಯ ಸಾಧನೆಯಿಂದ, ತಮ್ಮ ಸರಳ ಬದುಕಿನಿಂದ ನಮಗೆ ವಿಶೇಷ ಸ್ಫೂರ್ತಿಯಾಗಿ, ಅಪರೂಪದ ಮಾದರಿಯಾಗಿದ್ದಾರೆ. ಪರಿಸರದೊಂದಿಗಿನ ಅವರ ಸಂಬಂಧ, ಕೃಷಿಯನ್ನು ಅವರು ತಮ್ಮ ಜೀವನದ ಅಂಗವಾಗಿ ಪರಿಗಣಿಸುವ ರೀತಿ ಮತ್ತು ತಮ್ಮ ಬದುಕಿನ ಕಲಿಕೆಗಳ ಬಗ್ಗೆ ಅವರ ವಿಶ್ಲೇಷಣೆ ಈ ಪುಸ್ತಕದಲ್ಲಿ ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೇವೆ.

**- ಪ್ರಕಾಶಕರು**

ಇಂದು ರೈತರು ಅನುಸರಿಸುತ್ತಿರುವ ' ಉಗ್ರ ಕೃಷಿಪದ್ಧತಿ ' ಯಿಂದ ಯಾರಿಗೆಷ್ಟು ಲಾಭವಾಗಿದೆಯೋ ಗೊತ್ತಿಲ್ಲ. ಆದರೆ ಭೂಮಿಗೆ ಮಾತ್ರ ಹಾನಿಯಾಗಿರುವುದು ನಿಜ. ಸಹಜ ಸಮೃದ್ಧ ಹೊಲದಲ್ಲಿ ರಾಸಾಯನಿಕ ಸುರಿದುದರ ಪರಿಣಾಮ ಕಣ್ಣೆದುರೇ ಇದೆ. ಬೆಳೆದ ಬೆಳೆಗೆ ಸರಿಯಾದ ಬೆಲೆ ದೊರಕದೇ ರೈತ ಕಂಗಾಲಾಗಿದ್ದಾನೆ. ಸಮಸ್ಯೆ ಬಿಗಡಾಯಿಸುತ್ತಲೇ ಇದೆ.

ಆದರೆ ಇದಕ್ಕೆಲ್ಲ ಪರಿಹಾರ ನಮ್ಮಲ್ಲೇ ಇದೆ. ಅದು ಸಹಜ ಕೃಷಿ ಈ ನಿಟ್ಟಿನಲ್ಲಿ ಉಡುಪಿ ಜಿಲ್ಲೆಯ ಚೇರ್ಕಾಡಿ ಎಂಬ ಕುಗ್ರಾಮದ ರಾಮಚಂದ್ರರಾಯರ ಸಾಧನೆ ಗಣನೀಯ. ' ಆಧುನಿಕತೆಯ ದಾಳಿ ' ಯಿಂದ ಬಲು ದೂರವಿರುವ ರಾಯರು ತಮ್ಮವೇ ಆದ ಪದ್ಧತಿ, ಸಂಶೋಧನೆಯ ಮೂಲಕ ಕೃಷಿಯಲ್ಲಿ ಸರಳತೆಗೇ ಪ್ರಾಮುಖ್ಯ ನೀಡಿದರು. ಹೆಚ್ಚು ಫಲ ನೀಡುವಂತೆ ಭೂಮಿಯ ಮೇಲೆ ಒತ್ತಡ ಹಾಕದೆಯೇ ಅದು ಕೊಟ್ಟಷ್ಟನ್ನು ತೃಪ್ತಿಯಿಂದ ಸ್ವೀಕರಿಸಬೇಕು ಎನ್ನುವ ಇವರು, ಇಂದಿನ ರೈತರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಸ್ವಾವಲಂಬನೆಗೆ ದಾರಿ ತೋರುವ ಈ ಪುಸ್ತಕ, ಮಣ್ಣನ್ನು ಇಷ್ಟಪಡುವ ಎಲ್ಲರಿಗೂ ಪ್ರಿಯವಾಗಬಲ್ಲದು.

**ಎ.ಎನ್.ಪ್ಯಾಟಿ, ಪ್ರಜಾವಾಣಿ - ವಾಣಿಜ್ಯ ಕೃಷಿ ಪುರವಣಿ -12.02.2003**